# ರಾಮದಾಸ್

(ಸಾಮಾಜಿಕ ಕಾದಂಬರಿ)



ಲೇಖಕ:—

ಎಂ. ಬಿ. ಅಲ್ಫಾನ್ಸೊ.



1946

೧ ರೂ.

# ಮೊದಲು ಮಾತು

—:0:—

ಇದು 'ರಾಮದಾಸ' ವೆಂಬುದೊಂದು ಸಾಂಸಾರಿಕ ವಾದ ಚಿಕ್ಕ ಕಲ್ಪಿತ ಕಥೆಯಾಗಿದೆ. ಇದನ್ನು ಕಲ್ಪಿಸಿಕೊಂಡು ಬರೆದದ್ದಾದರೂ, ಲೋಕದಲ್ಲಿ ಇಂಥಹ ಸಂಗತಿಗಳು ತುಂಬಾ ನಡೆಯುತ್ತಿರುವವು. ಇದೊಂದು ರಾಮದಾಸನ ಜೀವನದ ರೀತಿ-ನೀತಿ, ಮತ್ತದರ ಪರಿಣಾಮದಿಂ ದಾಗಿಯೂ, ಲೇಖನಾನಿರ್ಮಿತವಾದ ಸೊಬಗು ಮತ್ತು ಚಮತ್ಕಾರಗಳಿಂದಾಗಿಯೂ, ಓದಲು ಮನೋರಂಜನೆ ಯಾಗಿಯೂ, ರಸಿಕವಾಗಿಯೂ ಇರುವ ಕಾರಣ ಓದುಗ ರಿಗೆ ಕಲ್ಪಿತ ಲೇಖನವೆಂದು ಗೋಚರಿಸಲಾರದು. ಇದ ರಲ್ಲಿ ರಾಮದಾಸನು ತಾರುಣ್ಯಮದದಿಂದ ಪ್ರಾರಂಭ ವಾದ ದುಷ್ಟ ಜೀವನದಿಂದ ಮುಂದುವರಿಸಿ ಮರಣ- ಪರ್ಯಂತದ ಸಂಗತಿಗಳು ಮಾತ್ರವಿರುವದರಿಂದ ಇದೊಂದು ಸಂಪೂರ್ಣ ಜೀವನ ಚರಿತ್ರೆಯೆಂದು ಭಾವಿಸ ಲಾಗುವದಿಲ್ಲ.

ಈ ಚಿಕ್ಕ ಕಥೆಯಿಂದ ನೂತನ ತರುಣ-ತರುಣಿ
ಯರು ತುಂಬಾ ವಿಷಯಗಳನ್ನು ಅರಿಸಿಕೊಳ್ಳಬಹುದಾಗಿ
ರುತ್ತವೆ. ಹಣದ ಹೆಮ್ಮೆಯಿಂದಲೂ, ಯೌವನದ ಮದ
ದಿಂದಲೂ ದುಷ್ಟ ಜೀವನದಲ್ಲಿ ನಿರತರಾದರೆ, ಕೊನೆಗೆ
ಅದರಿಂದುಂಟಾಗುವ ಪರಿಣಾಮವು ನಿಜವಾಗಿಯೂ
ಭಯಂಕರವಾಗಿರುತ್ತದೆಂಬುದು ಇದರಿಂದ ತಿಳಿಯುವದು
ಈ ನವೋಪನ್ಯಾಸದಲ್ಲಿ ಸತ್ಪುರುಷರಿಗೆ ದೈವಸಹಾಯ-
ವುಂಟೆಂದೂ, ದುಷ್ಟರಿಗೆ ಮನುಜರೂ ಕೂಡಾ ಸಹಾಯ
ರಾಗಲಾರರೆಂದೂ; ಶಿಷ್ಟರಿಗೆ ಲೋಕವೇ ಸಹಕರಿಸುವು
ದೆಂದೂ; ದುಷ್ಟರಿಗೆ ಪ್ರಾರಂಭದಲ್ಲಿ ಸುಖಕಂಡುಬಂದರೂ
ಪರಿಣಾಮದಲ್ಲಿ ಭಯಂಕರ ದುಃಖವುಂಟಾಗುವದೆಂದೂ
ತಿಳಿಯುವದು. ಆದ್ದರಿಂದ ತರುಣ ತರುಣಿಯರು ಅತ್ಯಾ
ದರದಿಂದ ಇವನ್ನು ಓದಿ ತಾವು ರಾಮದಾಸನಂತೆ ದುಷ್ಟ
ಜೀವನದಲ್ಲಿ ಸಿಲುಕಿ ಭಯಂಕರ ಮರಣವನ್ನು ಬಯಸ
ಚಾರದಾಗಿ ಪ್ರಯತ್ನಿಸಿ, ಸಂಸಾರಾನುಭವವನ್ನುಂಟು
ಮಾಡಿಕೊಳ್ಳುವುದಾದರೆ ಆದಿಗೆ ಗ್ರಂಥಕರ್ತನ ಈ ಅಲ್ಪ
ಶ್ರಮವು ಸಾರ್ಥಕವಾಗುವದು.

Karkala, S. K.
1st January 1943.

M. B. ALPHANSO.

# ರಾಮದಾಸ.

———0●0———

ಸೇಕರನೊಂದು ದಿನ ತನ್ನ ಭಂಡಸಾಲೆಯಲ್ಲಿ ಆರಾಮ ಕುರ್ಚಿಯ ಮೇಲೆ ಬಿದ್ದುಕೊಂಡು ದೈನಿಕ ಪತ್ರಿಕೆಯನ್ನು ಓದುವುದರಲ್ಲಿ ಮಗ್ನನಾಗಿದ್ದನು. ಹಲ ಕೆಲವು ಗಿರಾಕಿಗಳು ಬಂದು, ರಾಯರು ಕೂಡಲೆ ತಮಗೆ ಬೇಕಾದ ಸಾಮಾನುಗಳನ್ನು ಕೊಟ್ಟು ಹಿಂದೆ ಕಳಿಸಬಹುದೆಂದು ಅತಿಯಾದ ಅಪೇಕ್ಷೆಯಿಂದ ಕಾಯುತ್ತಿದ್ದರು. ಅಷ್ಟರೊಳಗೆ ಪೋಸ್ಟಮನ್ನನು ಒಂದು ರಿಜಿಸ್ಟ್ರೀ ಕಾಗದ ತಂದುಕೊಟ್ಟ. ಆ ಕವರಿನ ಮೇಲ್ವಿಳಾಸ ನೋಡಿಯೇ ಸೇಕರನ ಮುಖಭಾವವು ಬದಲಿಸಿತು. ಆ ಪತ್ರವು ತನ್ನ ಅಣ್ಣ ರಾಮದಾಸನದೇ ಆಗಿರಬೇಕೆಂದು ಅವನಿಗೆ ಹೊಳೆಯಿತು. ಆ ಕಾಗದ ಬಿಚ್ಚಲು ಆತನ ಮನಸ್ಸೇ ಒಡಂಬಡಲಿಲ್ಲ. ಅದನ್ನು ಅಲ್ಲಿಯೇ ಮೇಜಿನ ಮೇಲೆ ಎಸೆದು, ಪುನಃ ಪತ್ರಿಕೆಯ ಕಡೆಗೆ ತಿರುಗಿದನು; ಆದರೆ ಮನಸ್ಸಿನ ಕಳವಳವನ್ನು ಸಹಿಸಲಾಗಲಿಲ್ಲ. 'ಇದರಲ್ಲಿ ಏನೇನು ಬರೆದಿರಬಹುದು? ಇದುವರೆಗೆ ಕಳಿಸಿದ ಹಣವನ್ನು ಸದ್ಯದಲ್ಲೇ ತಿರುಗಿ ಕಳಿಸುವೆನೆಂದು ಬರೆದಿರುವನೆ? ಅಥವಾ ಊರಿಗೆ ಬರುವನೋ

ಎಂದೆಲ್ಲ ಭಿನ್ನಾಭಿಪ್ರಾಯಗಳು ಸೇಕರನ ಮನಸ್ಸಿನೊಳಗೆ ಸುತ್ತಾಡಿದವು. ಅದರಿಂದ ಆತ ಆ ಪತ್ರವನ್ನು ಒಡೆದನು. ಅದಾವ ಕಾರಣದಿಂದಲೋ ಅವನ ಕೈ ನಡುಗಹತ್ತಿದವು. ಆ ಕಾಗದದಭಿಪ್ರಾಯವನ್ನೇನು ಹೇಳುವುದು? ಅದರಲ್ಲಿ ಬರೆದದ್ದು ಪದ್ಧತಿಯಂತೆ ಒಕ್ಕಣಿಕೆಯಲ್ಲದೆ ಮತ್ತೇನೂ ಇರಲಿಲ್ಲ. 'ಕಳೆದ ತಿಂಗಳಲ್ಲಿ ನೀನು ಕಳಿಸಿದ ನೂರು ರೂಪಾಯಿ ನನಗೆ ತಲ್ಪಿವೆ; ಆದರೆ ದುರದೃಷ್ಟದಿಂದ ನನಗೆ ಸೌಖ್ಯವಿಲ್ಲದ್ದರಿಂದ ಡಾಕ್ಟರರಿಗೆ ಸಲ್ಲತಕ್ಕ ಫೀ-ಔಷಧ ಗಳಿಗೆ ಸುಮಾರು 150 ರೂ. ಖರ್ಚಾಯಿತು. ಆದ್ದರಿಂದ ತಾಯಿ ಮತ್ತು ತಮ್ಮ ಸೇರಿ 200 ರೂ. ಗಳನ್ನಾದರೂ ತೀವ್ರ ಕಳಿಸಬೇಕಾಗಿ ಬಿನ್ನಹ,' ಎಂಬ ಸಂಗತಿಯು ಆ ಕಾಗದದಲ್ಲಿ ಪ್ರಾಮುಖ್ಯವಾಗಿತ್ತು.

ಸೇಕರ ಅದನ್ನು ಎರಡೆರಡು ಸಲ ಓದಿದ. ರಾಮ ದಾಸನ ಅಚ್ಚುಕಟ್ಟಾದ ಒಕ್ಕಣಿಕೆ ಓದಿ, ಓದಿ ಅತನ ತಲೆ ತಿರುಗಹತ್ತಿತು. ಕೆಲವೊಮ್ಮೆ ಕೋಪದಿಂದ ಬಾಯಿ ಗೆ ಬಂದಂತೆ ಬೈಯಲಾರಂಭಿಸಿದ. ಮಿತಿಮೀರಿದ ಸಿಟ್ಟಿ ನಿಂದ ಅವನ ಕಣ್ಣುಗಳೆ ಕಾಣದಾದವು. ಅಂಗಡಿಗೆ ಬಂದ ಗಿರಾಕಿಗಳು ರಾಯರ ಕೆಂಪಡರಿದ ಕಣ್ಣುಗಳನ್ನು ನೋಡಿ ಭಯಚಕಿತರಾದರು. ಬಾಯಿಂದ ಪುಟು ಪುಟು ಎಂದು ಕೇಳಬರುವ ಬೈಗಳಿಗೆ ಅಂಜಿ ಓಡಿಹೋದರು. ಸೇಕರನು ಅರ್ಧ ಗಂಟೆಯ ವರೆಗೂ ಆ ಆರಾಮ ಕುರ್ಚಿಯಿಂದೇಳಲೇ ಇಲ್ಲ. ನಿದ್ರಿಸುತ್ತಿರುವಂತೆ ನಟಿಸಿ, ನಂತರ ಪುನಃ

ಆ ಕಾಗದದ ಕಡೆಗೆ ದೃಷ್ಟಿ ತಿರುವಿದನು. ಕೋಪವನ್ನು ತಡೆಯಲಾಗಲಿಲ್ಲ. ಅದನ್ನು ಮುದುಡಿ ಜೇಬಿಗೆ ಸೇರಿಸಿ ಗಿರಾಕಿಗಳತ್ತ ಹೊರಳಿದ. ಪತ್ರದ ಯೋಚನೆ ಸಂಪೂರ್ಣ ತೊರೆದು ಅಂಗಡಿಯ ವ್ಯವಹಾರದಲ್ಲಿ ತೊಡಗಿದ. ಸಂಜೆ ಯಾಯಿತು; ಕತ್ತಲೆ ಕವಿಯುತ್ತಲೆ, ನಿತ್ಯದ ಹೊಳೆಗಿಂತ ಮೊದಲೇ ಭಂಡಶಾಲೆಗೆ ಬೀಗವನ್ನೊತ್ತಿ: ಬೀಗದ ಕೈ ಯನ್ನು ಕಿಸೆಗೆ ಹಾಕುವಷ್ಟರಲ್ಲಿ ಕಿಸೆಯಲ್ಲಿ ಏನೋ ಇದ್ದ ಹಾಗೆ ಗೋಚರವಾಯಿತು, ಅಲ್ಲಿ ಕಾಗದದ ಮುದ್ದೆಯು ಇರುವದನ್ನು ಕಂಡು ಬಿಚ್ಚಿ ನೋಡಿದನು. ಅದು ರಾಮ ದಾಸನ ಪತ್ರವೆಂದರಿತ ಕೂಡಲೆ ಆವನಿಗೆ ವಿಷವೇರಿತು. ಒಂದು ಗಂಟೆಯ ಮಾರ್ಗವನ್ನು ಕಾಲು ಗಂಟೆಯಲ್ಲೇ ಮುಗಿಸಿ ಮನೆಯನ್ನು ಸೇರಿದ. ಮೈಮೇಲಿನ ವಸ್ತ್ರಗಳೆಲ್ಲ ಬೆವರಿನಿಂದ ತೊಯ್ದು ಹೋಗಿದ್ದವು, ಮನೆಗೆ ತಲುಪಿದ ಕೂಡಲೆ ಬಟ್ಟೆಗಳನ್ನೆಲ್ಲ ತೆಗೆದಿಟ್ಟು, ಬೇರೆ ವಸ್ತ್ರಗಳನ್ನು ಧರಿಸಿಕೊಂಡು ಆರಾಮ ಕುರ್ಚಿಯಲ್ಲಿ ಒರಗಿಕೊಂಡನು. ಅಲ್ಲಿ ಕೈಕಾಲುಗಳನ್ನು ಉದ್ದವಾಗಿ ನೀಡಿ ವಿಶ್ರಮಿಸುವಾಗ ಒಂದು ನಿಟ್ಟುಸಿರು ಬಿಟ್ಟನು. ಅದೇ ಸಮಯಕ್ಕೆ ಆತನ ತಾಯಿಯಾದ ರಾಧಿಕೆಯು ಗಡಿಬಿಡಿಯಿಂದ ನಡುಮನೆ ಯೊಳಗಿನಿಂದ ಪಡಸಾಲೆಗೆ ಬಂದಳು; ಹಾಗು ಅಲ್ಲಿಗೆ ಅಗತಾನೆ ಬಂದು ನೀರವವಾಗಿ ಕುಳಿತಿದ್ದ ಸೇಕರನನ್ನು ದ್ದೇಶಿಸಿ:—ಏನು ಸೇಕರ, ಬೇಗ ಬಂದೆ? ಜೀವಕ್ಕೆ ಸೌಖ್ಯ ವಿಲ್ಲವೆ? ಎಂದು ಆತುರದಿಂದ ಕೇಳಿದಳು.

ಸೇಕರ:—ಭಂಡಸಾಹಿಗೆ ಬೇಗ ಬೇಗ ಬಿತ್ತೇನೋ ನಿಜ- ಆದರೆ ನಿಮ್ಮ ರಾಮದಾಸನ ಕಾಗದದಿಂದ ಮನಸ್ಸಿಗೆ ಶಾಂತಿಯೇ ಇಲ್ಲ. ನನ್ನ ಹೊರತು ಬೇರೆ ಯಾವನೊಬ್ಬ ಸಾಧಾರಣ ವ್ಯಕ್ತಿಯಾಗಿದ್ದರೆ, ಇಷ್ಟರಲ್ಲೇ ಈ ಪ್ರಪಂಚವನ್ನು ಬಿಟ್ಟು ಹೋಗುತ್ತಿದ್ದನು- ನಾನೇ ಎಂತು ಉಳಿದಿದ್ದೇನೆ.

ರಾಧೆ:—ಅದೇಕು ಶೇಕರ, ನಿನಗುಂಟಾದ ಸಂಕಟವಾವುದು? ನಿನಗೆ ರಾಮದಾಸನಲ್ಲಿ ಇಷ್ಟು ವೈರತ್ವವೇಕೆ?

ಸೇ:—ಅಮ್ಮಾ, ನಾನು ಏನೆಂದು ಹೇಳಲಿ? ರಾಮದಾಸನ ಕಾಗದ ಬಂದಿದೆ.

ರಾ:— ಏನು, ರಾಮದಾಸನ ಪತ್ರ ಬಂದಿದೆಯೆ?

ಸೇ:—ಅಲ್ಲ, ಅಲ್ಲ; ನಿಮ್ಮ ಮಗನ ಕಾಗದ.

ರಾ:—ನನ್ನ ಮಗನಾದರೇನಾಯಿತು ಸೇಕರ, ನಿನಗೆ ಅಣ್ಣನಲ್ಲವೆ? ಮಗು! ಚಿಕ್ಕ ಬಾಲಕರಂತೆ ಆನ್ನುವೆಯಲ್ಲ!

ಸೇ:—ಹೌದು. ತಾವಂದಂತೆ ನನ್ನ ಅಣ್ಣನೇ ಸರಿ; ಆತನದೇ ಪತ್ರ!

ರಾ:—ಕಾನೂನಿನ ಮೇರೆಗೆ ನಿಮ್ಮ ಲೆಕ್ಕಾಚಾರವು ಮುಗಿದಿಲ್ಲವೆ? ಹಾಗಾದರೆ ರಾಮದಾಸನು ನಿನ್ನ ಅಣ್ಣನೆಂದು ಪರಿಗಣಿಸಲಿಕ್ಕೂ ಕಾನೂನೇ ಬೇಕೇ? ಸೇಕರ, ರಾಮದಾಸನು ನಿಜವಾಗಿಯೂ ನಿನ್ನ ಅಣ್ಣನಲ್ಲವೆ?

ಸೇ:—ಅಹುದು. ನಿಜವಾಗಿಯೂ ಆತನು ನನಗೆ ಅಣ್ಣನೆಂದು ಒಪ್ಪಬೇಕಾಗಿದೆ. ಇಂಥ ನಿರ್ದಾಕ್ಷಿಣ್ಯನಾದ

ಅಣ್ಣನಿದ್ದರೆ ನನ್ನಂಥ ಜಡ ಪಾಪಿಯು ಸಂನ್ಯಾಸಿಯಂತೆ ತಲೆ ಬೋಳಿಸಿಕೊಂಡು ಅಂಡಲೆಯಬೇಕಾದೀತು.

ರಾ:—ಅದೆಲ್ಲ ಪುರಾಣವೀಗ ಬೇಡ ಸೇಕರ. ಆ ಪತ್ರದಲ್ಲೇನಿದೆ? ಆರೋಗ್ಯದಿಂದಿರುವನಷ್ಟೆ?

ಸೇ:—ಕ್ಷೇಮಕ್ಕೇನೂ ಅಡ್ಡಿಯಿಲ್ಲ. ದೇಹಭಾರವು ಹೆಚ್ಚಿದೆ, ಬೊಜ್ಜು ಬೆಳೆದು, ಕೆಲಸ ಮಾಡಲು ಎಷ್ಟೆ ಮಣಿ ಸುದಾಗಿದೆ. ನೆವಕ್ಕೆ ತಕ್ಕ ಕೆಲಸವೆಲ್ಲೂ ದೊರೆಯುವ ದಿಲ್ಲೆಂದು ಒರೆಯುತ್ತಾನೆ, ಈಗ ಇಂಥವರದೇ ಕಾಲ!

ರಾ:—ಮತ್ತೇನು ಬರೆದಿದ್ದಾನೆ-ಆ ಊರಿನಸುದ್ದಿ?

ಸೇ:—ಪರವೂರಿನ ಸುದ್ದಿಗೇನು ಕೊರತೆ? ಅವನ ಜೀವನವೆಂದರೆ ನಮ್ಮ ಹಾಗಲ್ಲ; ಅದು ಅರಸರಂತೆ! ಇಲ್ಲಿ ಕಷ್ಟಪಟ್ಟು ದುಡಿದು ಒಂದೆರಡು ಕಾಸು ಗಳಿಸುವವರು ನಾವು; ಅದನ್ನು ಧರ್ಮಾರ್ಥವೆಂದು ಕೇಳುವವನು ಅತ! ಇದೇ ನನ್ನ ಅವರ ಅವಸ್ಥೆ.

ರಾ:—ಹಾಗೆಂದರೇನು?

ಸೇ:—ಅದನ್ನು ಹೇಳುತ್ತೇನೆ, ಕೇಳು. ಅತನು ಹಣಕ್ಕಾಗಿ ತಿಂಗಳಿಗೆರಡೆರಡು ಪತ್ರ ಬರೆಯುತ್ತಾನೆ. ಅವ ನಿಗೆ ಎಷ್ಟು ಹಣ ಕಳಿಸಿದರೂ ಸಾಲದು. ಅದೆಷ್ಟಿದ್ದರೂ ಉಪ್ಪಿನಂತೆ ನೀರಾಗಿ ಹೋಗುತ್ತದೆ. ಇದರಿಂದ ನಮಗೆ ನಷ್ಟವಲ್ಲವೆ? ಒಂದು ಕಾಸಿನ ಪ್ರಯೋಜನವಿಲ್ಲ. ಡಿವಾಲು ನೂರು ರೂಪಾಯಿನಂತೆ ಕಳಿಸಿದರೂ ಜೀಪವೆನ್ನುವವ ರಾಮದಾಸನಲ್ಲಿ. ನೋಡು, ಈಗ ಪುನಃ ಕಾಗದ ಬಂದಿದೆ.

ಒಂದು ನೂರು ರೂಪಾಯಿ ಕಳಿಸಿ ಹತ್ತು ದಿವಸ ಕೂಡ ಆಗಲಿಲ್ಲ. ಇಷ್ಟರಲ್ಲೇ ಮತ್ತೆ ಎರಡುನೂರು ರೂಪಾಯಿ ಕಳಿಸಬೇಕೆಂದು ಬರೆದಿದ್ದಾನೆ, ಪ್ರತಿ ಪತ್ರದಲ್ಲೂ ಒಂದೇ ಒಕ್ಕಣೆ! ಗೇಣಿ ಚೀಟಿಯಲ್ಲಿ ಬರೆದಂತೆ ಅವನಿಗೆ ಸಲ್ಲುವ ಮೊಬಲಗಿನಲ್ಲಿ ಮಾತ್ರ ಕೊಂಚವೂ ವ್ಯತ್ಯಾಸವಾಗದು. ಆತನ ಆ ಲೆಕ್ಕಗಳನ್ನು ನಾನು ನಿಂತುಮಾತ್ರವಾಗಿ ಕಳಿಸುತ್ತಿರುವದರಿಂದ ಬದುಕಿಕೊಂಡೆ. ಇತರರು ಗಳಿಸಿದ್ದನ್ನು ತಿಂದು ಸಾಯುವದು ಬಹುಸುಲಭ. ಇಲ್ಲಿ ಅವನ ಭಂಡಸಾಲೆ ಇದ್ದಿದ್ದರೆ ಈಗ ಇನ್ನೂರೇ ಏಕೆ, ಸಾವಿರವಾದರೂ ಗಳಿಸಬಹುದಿತ್ತು! ಆಲಸಿಗರ ಸ್ವಭಾವವೇ ಇಂಥದು.

ರಾ:—ಹಾಗೆನಬಾರದು ಮಗು. ನಮ್ಮ ರಾಮದಾಸನು ಎಷ್ಟು ಕಷ್ಟದಲ್ಲಿರುವನೊ ದೇವರೇ ಬಲ್ಲ! ದೇಶಬಿಟ್ಟು ಸುಮಾರು ನಾಲ್ಕು ವರ್ಷಗಳಾದವು. ಹೆತ್ತವಳ ಮೋರೆ ನೋಡಲಿಲ್ಲ. ಕೈ ಹಿಡಿದ ಹುಡುಗೆಯ ಕಂಡಿಲ್ಲ. ತಮ್ಮಂದಿರನ್ನು ಕಾಣಲಿಲ್ಲ. ಉದ್ಯೋಗಕ್ಕೋಸುಗ ಊರೂರು ಅಲೆದು ಕಷ್ಟಪಡುತ್ತಾನೆ. ಏನು ಮಾಡುವದು? ಅದೃಷ್ಟ ಫಲವಿಲ್ಲ. ವಿದ್ಯೆ ಕಲಿತ ಕರ್ಮಕ್ಕಾಗಿ ಹೆತ್ತವರನ್ನು ಬಾಲ್ಯದಲ್ಲೇ ತ್ಯಜಿಸಿ, ತಿರುಕನಂತೆ ಊರೂರು ತಿರುಗಬೇಕಾಯಿತು. ಶನಿ ಬೆನ್ನಟ್ಟಿಬಿಟ್ಟಿದೆ. ಅವನ ಅದೃಷ್ಟವೇ ಹಾಗಿದೆ. ಇಲ್ಲದಿದ್ದರೆ ಹೀಗಾಗುವದುಂಟೇ? ನಿನಗೇನೋ ದೇವರ ದಯೆಯಿಂದ ವ್ಯಾಪಾರದಲ್ಲಿ ಒಳ್ಳೇ ಲಾಭವಾಗುತ್ತದೆ. ಆದ್ದರಿಂದ ರಾಮದಾಸನನ್ನು ಅನ್ಯ

ನೆಂದು ಭಾವಿಸದೆ, ಕಷ್ಟದಿಂದ ಪರಿಪರಿಯಾಗಿ ನರಳುವ ಆತನಿಗೆ ಒಳ್ಳೇ ಸಹಾಯ ಮಾಡಬೇಕು ಸೇಕರ. ಸಂಕಟ ದಲ್ಲಿ ಕೈ ಬಿಡಬೇಡ. ದೇವರು ನಿನಗೆ ಇನ್ನೂ ಮಿಗಿಲಾದ ಶುಭಕ್ಕೆ ದಾರಿ ತೋರುವನು. ನಿನ್ನ ಹಣ ಹಾಳಾಗುತ್ತಿದೆ ಎಂದು ಕಳವಳಿಸಬೇಡ. ರಾಮದಾಸನಿಗೆ ತಕ್ಕ ಕೆಲಸವು ದೊರೆತ ನಂತರ ನಿನ್ನ ಹಣವನ್ನು ಬಡ್ಡಿ ಸಹಿತ ನಿನಗೆ ಕೊಡದಿರನು. ಪಾಪ! ಹೊಟ್ಟೆಗೆ ಅನ್ನವಿಲ್ಲದೆ ಎಷ್ಟು ದಿನ ಗಳಾದವೋ ತಿಳಿಯದು! ಪರ ಊರಿನ ಜೀವನ ಮೊದಲೆ ಕಷ್ಟಕರ. ಆದರ ಅರಿವ ಪರವೂರಿಗೆ ಹೋದವರಿಗೇನೇ ಆದೀತು. ನಿನ್ನ ಮೇಲೆ ಇರುವಷ್ಟು ದೇವರ ದಯೆಯು ರಾಮದಾಸನಲ್ಲಿದ್ದಿದ್ದರೆ, ಅತನು ಇಂದು ನಿನ್ನನ್ನು ಹಣ ಕ್ಕಾಗಿ ಯಾಚಿಸುತ್ತಿದ್ದನೆ?

ಸೇ:--ದೇವರ ದಯೆಯೆ ನನಗೆ ಮೋಸಕೊಟ್ಟಿತು ತಾಯಿ! ಇಲ್ಲವಾದರೆ ನನ್ನ ಅವಸ್ಥೆ ಹೀಗಾಗುತ್ತಿತ್ತೇ? ಪ್ರತಿ ದಿನ ನಿದ್ದೆಗೆಟ್ಟು. ಸಮಯಕ್ಕೆ ತಕ್ಕ ಆಹಾರವಿಲ್ಲದೆ, ರಕ್ತವನ್ನು ಬೆವರು ಮಾಡಿ ಗಳಿಸಿದ ಹಣವೆಲ್ಲ ಅಣ್ಣನಿ ಗಾಗಿಯೇ ಏನು? ಇಂಥ ದೇವರ ದಯೆ ಇರದಿದ್ದರೇನೇ ವಿಹಿತವಿತ್ತು! ಈಗ ಬಡಕಲಾಗಿರುವ ನನ್ನ ಶರೀರವು ಒಳ್ಳೇ ಪುಷ್ಟವಾಗಿ ಗಾಳಿ ತುಂಬಿದ ಪುಟ ಚೆಂಡಿನಂತಿರು ತ್ತಿತ್ತು. ರಾಮದಾಸ ಇಷ್ಟು ವಿದ್ಯೆ ಕಲಿತು, ತನ್ನ ಸ್ವಂತದ ಜೀವನಕ್ಕೆ ಪ್ರಯೋಜನವಾಗದಿದ್ದರೆ ಏಕೆ ಬದುಕಬೇಕು? ಹಿರಿಯರ ಆಸ್ತಿಯನ್ನು ಕೇವಲ 20 ವಯಸ್ಸಿನಲ್ಲೆ ಧ್ವಂಸ

ಡಿ ಹೇಗೂ ಕಷ್ಟದಲ್ಲಿ 'ಬಿ.ಎ.' ಡಿಗ್ರಿ ಪಡೆದ. ವಿದ್ಯಾ
ಭ್ಯಾಸವನ್ನು ಮುಗಿಸಿಕೊಂಡು ಬರುವಾಗ ಆಸ್ತಿಯೂ,
ಮನೆಯಲ್ಲಿದ್ದ ವಸ್ತು-ಒಡವೆಗಳೆಲ್ಲವೂ ಲೋಪವಾದವು!
ಖರ್ಚಿಗೆ ಮತ್ತೆಲ್ಲಿಯೂ ಹಣ ಸಿಗದಾಯಿತು. ಅದರಿಂದ
ತಾಯಿ, ತಮ್ಮ, ಹೆಂಡತಿ, ಮಕ್ಕಳನ್ನೂ ಬಂಧು-ಬಳಗ
ದವರನ್ನೂ ತ್ಯಜಿಸಿ ವಿದೇಶಕ್ಕೆ ತೆರಳಬೇಕಾಯಿತು. ಕಲಿ
ತದ್ದು ಬಿ.ಎ. ಮಾತ್ರವಾದರೂ ಕಲೆಕ್ಟರರ ಕೆಲಸ ಸಿಗಬೇ
ಕೆಂದು ಆಶಿಸಿ, ಅಲ್ಪ ಕೆಲಸಗಳನ್ನೆಲ್ಲ ಬಿಟ್ಟುಬಿಟ್ಟ. 'ಅತಿ
ಆಶೆ ಗತಿಗೆಡಿಸಿತು' ಎಂಬ ಗಾದೆಯಂತೆ ದೊಡ್ಡ ಕೆಲಸವು
ಹೇಗೂ ಸಿಗಲೊಲ್ಲದು, ಸಣ್ಣ ಕೆಲಸ ಒಪ್ಪಲೊಲ್ಲದು. ಆಗ
ಹೊಟ್ಟೆಗೆ ಹಸಿವಾಯಿತು. ಆಗ ಊರಿನವರ ನೆನಪು ಹೊಂದ
ಬಾಯಿತು. ಊರಿಂದ ಯಥೇಷ್ಟ ಹಣ ತರಿಸಿ, ವಿದೇಶೀ
ಸಂಸಾರ ದಿಕ್ಕಟ್ಟಿನಲ್ಲಿ ಸಿಲುಕಿ, ಯೌವನ ಕಾಲದಲ್ಲಿ ಕೈ
ಹಿಡಿದ ಪತ್ನಿಯನ್ನು ಮರೆತೇ ಬಿಟ್ಟ. ಆತನ ಪತ್ನಿಯನ್ನು
ನನ್ನ ಮನೆಯಲ್ಲಿ ಎರಡು ವರ್ಷಗಳ ವರೆಗೆ ಸುಖದಿಂದ
ಇರಿಸಿಕೊಂಡಿದ್ದೆ. ಗಂಡನ ಚಿಂತೆಯಿಂದ ಅವಳಿಗೆ ಅನಾ
ರೋಗ್ಯವುಂಟಾಗಲು, ದೂರ ದೂರಿನ ಪ್ರಸಿದ್ಧ ವೈದ್ಯರನ್ನು
ಕರೆಸಿ, ಔಷಧೋಪಚಾರ ಮಾಡಿಸಿದೆ. ಅವಳನ್ನು ಖಾಸ
ತಂಗಿಯಂತೆ ತಿಳಿದು, ಅವಳ ಆರೋಗ್ಯಲಾಭಕ್ಕೆಂದು 2
ಸಾವಿರ ರೂಪಾಯಿ ಖರ್ಚು ಮಾಡಿದೆ; ಆದರೆ ಅದೆಲ್ಲವೂ
ವ್ಯರ್ಥವೇ. ಪತಿಚಿಂತಾಮಗ್ನಳಾದ ಅವಳು ಕೊಂಚವೂ
ಚೇತರಿಸಿಕೊಳ್ಳದೆ ಪರಲೋಕವನ್ನೈದಿದಳು! ತಾಯಿ

ಯನ್ನು ಕಳೆಕೊಂಡ ಅವನ ಅನಾಥ ಮಕ್ಕಳನ್ನು ತನ್ನವೇ ಎಂದು ಭಾವಿಸಿ, ಬಹು ಅಕ್ಕರದಿಂದ ಸಾಕಿ ಸಲುಹಿದೆನು ಅವರಿಗೆ ಬೇಕು ಬೇಕಾದ ಪದಾರ್ಥಗಳನ್ನು ಪೂರಯಿಸಿ, ತಾಯಿಯ ಮರಣದ ದುಃಖದ ಪರಿಣಾಮವು ಅವರಲ್ಲಿ ಉಂಟಾಗದಂತೆ ಹೆಚ್ಚಾಗಿ ಒದ್ದಾಡಿದೆ; ಆದರೆ ಅವುಗಳ ತಂದೆಯೆನಿಸುವವನಿಗೆ ಅದೆಲ್ಲ ಯೋಚನೆ ಬೇಡವೆ? ತನ್ನ ವಲ್ಲದಿದ್ದರೂ ತನ್ನವೇ ಎಂದು ತಿಳಿದು, ಅವರ ಸುಖ-ದುಃಖಗಳನ್ನು ನೋಡಿಕೊಂಡು ಪೋಷಿಸುವ ವ್ಯಕ್ತಿಯು ನನ್ನ ಹೊರ್ತು ಇನ್ನಾರಿರುವರು? ಆದರೂ ಚಿಂತೆಯಿಲ್ಲ, ಪರಮಾತ್ಮನು ಮೆಚ್ಚುವಂತಹ ಕಾರ್ಯದಲ್ಲಿ ನಿರತನಾದರೆ ಯಾವ ದೋಷವೂ ನಷ್ಟವೂ ಇರದು. ಆದರೆ ಮಾತಿಗೆ ಮಾತು ಬಂದರೆ, ಆತನ ಮಕ್ಕಳನ್ನು ಸಾಕಲು ಆತನೇ ನನಗೆ ಹಣ ಕಳಿಸುವ ಬದಲು ಅವನೇ ನನ್ನಿಂದ ತರಿಸಿ ಕೊಳ್ಳಲಿದ್ದಾನೆ! ಮಹಾ ಮೂರ್ಖನೆಂದರೆ ನಮ್ಮ ರಾಮ ದಾಸನೇ ಸರಿ! ಕೊಂಚವೂ ದಾಕ್ಷಿಣ್ಯಪಡದೆ ಮತ್ತೆಮತ್ತೆ ಹಣ ಕೇಳುತ್ತಿರುವನಲ್ಲ! ಅಮ್ಮಾ, ದೇವರ ದಯೆ ನನ ಗಾಯಿತು; ಹಣದ ಲಾಭ ರಾಮದಾಸಗಾಯಿತು ಅಲ್ಲವೆ?

ರಾ:—ಸೇಕರ, ನೀನು ಶತ ಮೂರ್ಖನು! ಇಲ್ಲದಿದ್ದರೆ ಆ ಬಡ ಅಣ್ಣನ ಬಗ್ಗೆ ನೀನು ಇಂಥ ನಿಷ್ಠೂರ ನುಡಿ ನುಡಿಯುತ್ತಿರಲಿಲ್ಲ ಒಂದೇ ಉದರದಲ್ಲಿ ಜನಿಸಿರುವ ನಿಮ್ಮಲ್ಲಿ ಇಷ್ಟು ದ್ವೇಷವೇಕೆ? ನೀವು ಸಹೋದರರೇ ಈ ರೀತಿ ವರ್ತಿಸಿದರೆ ಬೇರೆಯವರು ಹೇಗೆ ತಾನೆ ಜೀವಿಸ

ಬೇಕು? ಇವರ ವೈಮನಸ್ಸನ್ನು ಕಂಡು ಅನ್ಯರು ಆಶ್ಚರ್ಯ ಪಡುವರಲ್ಲದೆ ಆಸಹ್ಯವೂ ಪಡದಿರರು.

ಸೇ:—ಶತಹಲ್ಲ, ಸಹಸ್ರ ಮೂರ್ಖನು ನಾನು ಹಾಗಿಲ್ಲದಿದ್ದರೆ ಅವನಂತೆಯೇ ಇರಬೇಕಾಗಿತ್ತಲ್ಲವೆ? ಬಿ ಎ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಎಲ್ಲಿಯೋ ಒಂದು ಕಡೆ ಸರಕಾರಿ ಉದ್ಯೋಗದಲ್ಲಿ ತಿಂಗಳೊಂದಕ್ಕೆ 80 ರೂಪಾಯಿ ದೊರೆಯುವದನ್ನು ಕಾಲಿಲೆ ಒದೆದ. ಅದರಿಂದ ದೊರೆತ ಕೀರ್ತಿ ಸಾಲದೆಂದೊ, ದೊಡ್ಡ ಪದವಿ ದೊರೆಯದೆಂದೋ ಎಲ್ಲವನ್ನೂ ಬಿಟ್ಟು ಕೆಲವರಿಂದ ಬೇಷ್!-ಭಲೆ! ಎಂದೆನಿಸಿ ಕೊಳ್ಳಲೋಸ್ಕರ ಕಾಂಗ್ರೆಸ್ಸ ಚಳವಳಿಗೆ ಸೇರಿದ. ಲೋಕ ದುದ್ಧಾರಕ್ಕಾಗಿ ತನ್ನ ಸರ್ವಸ್ವವನ್ನೂ ತೊರೆದ. ಅಂತಹ ಮಹಾ ಪುರುಷರಿಗೆ ತಿಂಗಳ 80 ರೂ. ಯಾವ ಗಿಡದ ಸೊಪ್ಪು! [illegible]ನ್ನು ಕಾಲಿನಿಂದ ಒದ್ದು. ಬೀದಿ-ಬೀದಿ ಅಲೆ ದಾಡಿ [illegible] ಲೋಕೋದ್ಧಾರದ ಹುಚ್ಚು ಇವನೊಬ್ಬನಲ್ಲಿದ್ದರೆ ಸಾಕು ಇತರರಿಗೆ ಅಂಟುವದು ಬೇಡವೆಂದು ಸರಕಾರ ದವರು 1 ವರ್ಷ ಜೇಲಿನಲ್ಲಿಟ್ಟು, ಚೆನ್ನಾಗಿ ಮದ್ದು ಉಪ ಚಾರ ಮಾಡಿಸಿ ರೋಗವಾಸಿಯಾಯಿತೆಂದು ಬಿಟ್ಟುಬಿಟ್ಟರು ಅದು ಅಂಟು ರೋಗ. ಪಕ್ಕನೆ ವಾಸಿಯಾಗದು, ಮತ್ತೆ ಲೋಕೋದ್ಧಾರಕ್ಕೆಂದು ಹೇಚಾಡಿದ. ಬಾಲ್ಯದಲ್ಲಿ ತಂದೆ ಯಿಂದ ತಿಂಡಿ ಪೆಟ್ಟು, ಸಾಲದೆಂದೋ ಏನೋ ಸರಕಾರ ದವರಿಂದ ಲಾಠೀ ಪೆಟ್ಟು ತಿಂದು ಒಣ-ಚರಂಡಿಗಳಲ್ಲಿ ಹೊರಳಾಡಿದ. ಹೀಗಾಗಿ ಪುನಃ ಸೆರೆಮನೆಯ ಎಕೂಳನ್ನು

ಅರೆಸಿದ. ಆರು ತಿಂಗಳ ನಂತರ ಅನ್ನಕ್ಕೂ ಬಾರದಂತಹ ಈ ಅಪಸ್ಮಾರಿಯನ್ನು ಅಲ್ಲಿಂದ ಹೊರಗಟ್ಟಿದರು. ಕೆಲ ಕಾಲ ಅಲ್ಲಲ್ಲಿ ತಿರುಗಾಡಿದ. ಕಷ್ಟದಲ್ಲಿ ನರಳಿದ. ಬಳಿಕ ಊರ ಕಡೆಯ ನೆನಪಾಯಿತು. ತಾಯಿಯ ಆಭರಣಗಳೆಲ್ಲ ಒಂದೇ ಒಂದು ವರ್ಷದಲ್ಲಿ ಮಾರಿ ನುಂಗಿ ನೀರು ಕುಡಿದ. ಸತ್ತ ತಾಯಿ ಬದುಕಿರುವ ವರೆಗೆ ಒಂದು ಹಿಡಿ ಅನ್ನ ಸಹ ಕೊಡದಾದ. ಉಳಿದ ಮಕ್ಕಳು ಊರೂರು ತಿರುಕರಂತೆ ತಿರುಗಾಡಲೆಂದು ಬಯಸಿದ. ಇದೂ ಸಾಲದೆ ದೈವಿಕ ಶಕ್ತಿ, ಲೋಕನಾಯಕ ಶಕ್ತಿಗಳು ಹಣದೊಡನೆ ಕರಗಿದ ಬಳಿಕ ಶತಮೂರ್ಖನಾದ ಈ ತಮ್ಮನ ನೆನಪು ಬಂತು. ಇದರಿಂದಲೇ ನಾನು ಇಂದು ಅವನನ್ನು ಹಾಡಿ ಹರಸುತ್ತಿರುವದು!

ರಾ:—ಏನು ಮಾಡಿಯಾನು ಸೇಕರ?. ಗಂಡು ಜೀವದ ಪಾಡು ಹೇಗೂ ಆದೀತು; ಆದರೆ ಕೈ ಹಿಡಿದ ಆ ಹೆಣ್ಣಿನ ಗತಿಯೇನು?

ಸೇ:—ಕೈಹಿಡಿದ ಆ ಜೀವಕ್ಕಾಗಿ ಆ ಗಂಡುಜೀವ ಏನು ಮಾಡೀತು? ಹೇಳು. ಪ್ರಥಮ ಪತ್ನಿಯನ್ನು ಊರಲ್ಲಿ ಬಿಟ್ಟು, ಹೆಣ್ಣು ಕೊಟ್ಟ ಮಾವ, ಅತ್ತೆಯವರಿಗೆ ಕಣ್ಣೀರು ಸುರಿಸುವಂತೆ ಮಾಡಿದ. ಆ ಮೇಲೆ ಆ ಮಹಾ ಪುರುಷ ಮಾಡಿದ ಮಹತ್ಕಾರ್ಯವೆಂದರೆ ಒಂದೇ ಒಂದು.- ಪ್ರಾಯಶ್ಚಿತ್ತವಿಲ್ಲದೆ ಪುನಃ ವಿವಾಹವಾದುದು! ಸ್ವಾರ್ಥಿಗಳಂತೆ ದಯೆಯಿಲ್ಲದೆ ಧಾಳಿ ಹೊಡೆದ್ದಾ! ಕ್ಷಣವಲ್ಲೇ ಪತ್ನಿಯನ್ನಗಲುವ

ಮೂರ್ಖನಿಗೇನೋ ವಿವಾಹವಂತೆ ವಿವಾಹ! ತವರುಮನೆ ಯಲ್ಲಿ ಸುಖ-ಸೌಕರ್ಯದಿಂದಿದ್ದ ಹೆಣ್ಣನ್ನು ವಿವಾಹವಾಗಿ ತನ್ನ ಮನೆಗೆ ಎಳೆತಂದು, ಅಲ್ಲಿ ಪತಿಪರಿಯಿಂದ ಕಷ್ಟಪಡಿ ಸುವವನು ಪುನಃ ವಿವಾಹವಾದುದರ ಉದ್ದೇಶವೇನು? ಇಂಥ ದುಷ್ಕರ್ಮಗಳ ಬದಲು ತಾನೇ ಆತ್ಮ ತ್ಯಾಗ ಮಾಡುವದು ವಿಹಿತವು. ಹಾಗೆ ಆದರೆ ಲೋಕದಲ್ಲಿ ನಿಜ ವಾಗಿಯೂ ನೆಮ್ಮದಿಯುಂಟಾದೀತು. ತನ್ನ ಜೀವನಕ್ಕೇ ಗತಿಗೆಟ್ಟವನು ಪುನಃ ಮದುವೆಯಾದುದು ಪ್ರಪಂಚದಲ್ಲಿ ಹೆಣ್ಣಿನ ವಿಪುಲತೆಯ ದ್ಯೋತಕವಲ್ಲವೆ? ತಮ್ಮಲ್ಲಿರುವ ಹೆಣ್ಣನ್ನು ಯಾವನೊಬ್ಬ ಪುರುಷನ ಕೊರಳಿಗೆ ಕಟ್ಟುವ ವರೆಗೆ ಆ ಹೆಣ್ಣಿನ ತಾಯಿ-ತಂದೆಗಳಿಗೆ ನಿದ್ದೆಯೇ ಬರುವ ದಿಲ್ಲ. ಮಂತ್ರಹೇಳುವ ಬರಡು ಭಟ್ಟರುಗಳಿಗೆ ಮೃಷ್ಟಾನ್ನ ಭೋಜನ ಮತ್ತು ಕೈತುಂಬ ದಕ್ಷಿಣೆ ಸಿಕ್ಕಿದರೆ ಅವರು ಲಗ್ನದ ಮಂತ್ರ ಹೇಳಲು ಹಿಂಜರೆಯುವರೇ? ಇಷ್ಟೇ ಅಲ್ಲ ಜೀವಂತ ಮನುಷ್ಯ ಸತ್ತನೆಂದು ಭ್ರಮಿಸಿ. ಅಪರಮಂತ್ರ ಹೇಳಲಿಕ್ಕೂ ಆ ಹಾರುವರು ಸಿದ್ಧರೇ. ಅಂತೆಯೇ ನಮ್ಮ ರಾಮದಾಸನು ಆ ಕನ್ನಿಕೆಗೆ ಕಣ್ಮುಚ್ಚಿ ಕೈ ನೀಡಿದುದು. ಆಕೆ ಸ್ತ್ರೀ ಜಾತಿಯಲ್ಲಿ ಜನಿಸಿದ ಮಾತ್ರಕ್ಕೆ ಆತನು ಆವಳ ಕೈಹಿಡಿದದ್ದು. ಜಾತಿ, ವಂಶ, ಕುಲ, ಗೋತ್ರ ಮುಂತಾ ದವುಗಳನ್ನು ಪರೀಕ್ಷಿಸದೆ, ಹಣದ ಗಂಟನ್ನು ನೋಡಿ. ವಿವಾಹದ ಮುಹೂರ್ತವು ತಪ್ಪುವದೆಂದು ಹೆದರಿ, ಬೇಗ ಬೇಗವೆ ಕೈನೀಡಿರಬೇಕು, ಹೆಚ್ಚಿಗೆ ಹೇಳಲೇನು? ಹಿಂದು

ದಿನ ಸಹ ಮುಂಚೆ ಹುಟ್ಟಿದ ಅಣ್ಣನಿಗೆ ಬುದ್ಧಿ ಹೇಳಲು ತಮ್ಮನು ಯೋಗ್ಯನಲ್ಲವೆಂದು ಟಪಾಲು ಬರೆದು ತಿಳಿಸುತ್ತಾನೆ! ಆದರೆ ಅಗತ್ಯವಿದ್ದಾಗ ಮಾತ್ರ ತಮ್ಮನೇ ಬೇಕು. ಕಾಲ ಮಹಿಮೆ!

ರಾ:-- ಮೊದಲ ಹೆಂಡತಿ ಗತಿಸಿದ ಮೇಲೆ ಮತ್ತೆ ಲಗ್ನವಾಗದೇನು ಮಾಡಿಯಾನು? ಎಷ್ಟು ದಿನ ಹಿಬ್ಬೊಂಟಿಗನಿದ್ದಾನು? ಅದಕ್ಕೆಂದೇ ಹೊಸ ಸಂಸಾರ ಕಟ್ಟಿಕೊಂಡಿರಬಹುದು.

ಸೇ:—ಇಂಥ ಹೆಡ್ಡರಿಗೆ ಸಂಸಾರ ಕಟ್ಟಿಕೊಳ್ಳುವ ಹುಚ್ಚೊಂದಿದ್ದರೆ ಸಾಕು! ಎಲೈ ತಾಯಿ, ನಮ್ಮ ರಾಮದಾಸನಂಥ ಹುಚ್ಚರು ಅನೇಕ ಜನರಿರುವರು. ಸಂಸಾರ ಮಾಡಿಕೊಂಡಿರಬೇಕಾದರೆ ಕುಲಗೆಟ್ಟ ಹೆಣ್ಣನ್ನೇ ಲಗ್ನವಾಗಬೇಕೆಂಬ ನಿಯಮವಿದೆಯೇನು?

ರಾ:—ನಿನ್ನ ಹೃದಯದಲ್ಲಿರುವದು ವೈರದ ವಿಷ ಮಾತ್ರವಲ್ಲದೆ ಇನ್ನೇನೂ ಇಲ್ಲ. ನೀನು ಅಲ್ಲದ ಸಲ್ಲದ ಪ್ರಸ್ತಾಪವನ್ನೆತ್ತಿ ರಾಮದಾಸನನ್ನು ತಿರಸ್ಕರಿಸುತ್ತೀ. ಚಿಕ್ಕಂದಿನಲ್ಲಿ ನಿಮ್ಮ ಅಣ್ಣ-ತಮ್ಮಂದಿರಲ್ಲಿ ಎಷ್ಟು ಪ್ರೇಮವಿತ್ತೋ, ಈಗ ಅದಕ್ಕೆ ತೀರ ವಿರುದ್ಧವಾಗಿ ವೈರದಿಂದ ಕುದಿಯುತ್ತೀರಿ. ಶೇಕರ, ಇಹಲೋಕದಲ್ಲಿ ನೀನು ರಾಮದಾಸನನ್ನು ಅಣ್ಣನೆಂದು ತಿಳಿಯದಿದ್ದರೆ ಬಿಡು; ಆದರೆ ಪರಲೋಕದಲ್ಲಿ ಮಾತ್ರ ನೀವು ಸಹೋದರರು ಪ್ರೇಮ-ವಿಶ್ವಾಸಗಳಿಂದ ಇರಬಹುದೆಂದು ನನ್ನ ಭಾವನೆಯಿದೆ.

ಸೇ:—ಸಟಿ, ದಿಟಗಳ ನಿರ್ಣಯವು ಅಂತ್ಯದಲ್ಲೇ ಸರಿ. ನನ್ನಲ್ಲಿಯ ದ್ವೇಷವನ್ನು ಹೋಗಲಾಡಿಸುವದು ಸುಲಭ. ರಾಮದಾಸನು ಸ್ವಾವಲಂಬಿಯಾಗಲಿ. ತನ್ನ ಹಣವನ್ನು ಅನ್ಯರ ಕೊಟ್ಟಿಗೆಯುಲ್ಲಿ ಕಟ್ಟುವ ಔದಾರ್ಯವ ಬಿಟ್ಟು ಬಿಡಲಿ. ಆತನು ಸ್ವತಂತ್ರನಾಗಿ ಒಳ್ಳೆಯ ಸ್ಥಿತಿ ಯಲ್ಲಿದ್ದ ಮರು ದಿನವೇ ಏಕೆ, ಆ ಕ್ಷಣವೇ ನನಗೆ ಅವ ನಲ್ಲಿ ದ್ವೇಷವಿಲ್ಲ. ಆತನು ಇಲ್ಲಿಗೆ ಬಂದು ನನ್ನಲ್ಲಿಯೇ ಉಳುಕೊಳ್ಳಲಿ. ತಾನು ಬರುತ್ತೇನೆಂದು ತಂತಿ ಬಿಡಲಿ. ಕೂಡಲೆ ನಾನು ಉಗಿಬಂಡಿಯ ನಿಲ್ದಾಣಕ್ಕೆ ಹೋಗಿ ಹಸ್ತ ಲಾಘವವಿತ್ತು ಪುಷ್ಪಮಾಲಿಕೆ, ಉಡಿಗೆ-ತೊಡಿಗೆಗಳನ್ನು ತೊಡಿಸಿ, ಮೋಟರಕಾರಿನಲ್ಲಿ ಕುಳ್ಳಿರಿಸಿ, ಮಹಾರಾಜನನ್ನು ಕರೆತರುವ ರೀತಿಯಲ್ಲಿ ಬ್ಯಾಂಡ, ವಾದ್ಯ. ಮದ್ದು ಮುಂ ತಾದ ಸಂಭ್ರಮದೊಂದಿಗೆ ಆತನನ್ನು ಇದಿರ್ಗೊಂಡು, ಜಯಘೋಷದೊಡನೆ ಕರೆತರುವೆನು.

ರಾ:—ಪಿತ್ರಾರ್ಜಿತದಲ್ಲಿ ನಿಮಗೇನೋ ಪಾಲಾಗಿರ ಬಹುದು; ಆದರೆ ತಾಯಿಯ ಪ್ರೀತಿಯುಲ್ಲಿ ಇದುವರೆಗೂ ವಿಭಾಗವಾಗಿಲ್ಲವಷ್ಟೆ?

ಸೇ:—ಈ ವಿಷಯ ಈಗೇಕೆ? ಬೇಕಾದರೆ ನಿಮ್ಮ ಪ್ರೀತಿ ಅವನೊಬ್ಬನಿಗೇ ಸಂದು ಹೋಗಲಿ. ನನ್ನ ಆಕ್ಷೇಪ ಣೆಯಿಲ್ಲ. ತಾಯಿ,' ಇದು ಹಣದ ಪ್ರಪಂಚ. ಹಣಸಿಗುವ ವಿಷಯ ಆಗಿದ್ದರೆ ಬೆನ್ನಿಗೆ ಬೆನ್ನು ಹಚ್ಚುತ್ತಾರೆ. ಇಲ್ಲವಾ ದರೆ ಅವರ ಸುಳಿವೇ ಇರುವದಿಲ್ಲ. "ರೊಕ್ಕಪ್ಪನಿದ್ದರೆ

ಚಿಕ್ಕಪ್ಪನಿರುವ" ಎಂಬ ಗಾದೆಯು ಈಗಿನ ಕಾಲಪರಿಸ್ಥಿತಿ ಯುಂತಹದು. ಹೃದಯವೆಂಬುದು ಬಿಳಿನಾಣ್ಯಗಳ ಟಂಕ ಶಾಲೆಯೇನೂ ಇಲ್ಲ. ಆದ್ದರಿಂದ ಪ್ರೇಮ, ಪ್ರೀತಿಗಳು ಯಾರನ್ನೂ ಬದುಕಿಸಲಾರವು. ನನ್ನ ವ್ಯಾಪಾರದಲ್ಲಿ ಈಗೇನೂ ಲಾಭವಾಗುವದಿಲ್ಲ 'ಪುರಾಣಕಾಲದ ಭ್ರಾತೃಸ್ನೇಹವನ್ನಿಟ್ಟುಕೊಂಡಿದ್ದೇನೆ. ಅಣ್ಣನಿಗೆ ತಿಂಗಳಿಗೆ 100 ರೂ. ಕಳುಹಿಸುತ್ತೇನೆ. ಸ್ವಾಮಿೂ, ದಯಮಾಡಿ ನಮ್ಮಂಗಡಿಗೆ ಬಂದು 10 ರೂಪಾಯಿಯ ಮೂಲಿಗೆ 15 ರೂಪಾಯಿ ಕೊಟ್ಟು ನಮಗೆ ಲಾಭ ಬರುವಂತೆ ಮಾಡಿರಿ, ಬನ್ನಿರಿ," ಎಂದು [illegible]ಬ್ಬೆ ಹಾಕಿದರೂ ಗಿರಾಕಿಗಳು ಬರಲೊಲ್ಲರು. ನಮ್ಮ [illegible]ದರೆ ಬಕಾಸುರನ ಹೊಟ್ಟೆ! ಎಷ್ಟುಇದ್ದರೂ ಧ್ವಂಸ [illegible]ಗುತ್ತದೆ ಮನೆಯಲ್ಲಿರುವವರು ಸ್ವಲ್ಪಜನ ರಾವ[illegible]ದೊಡ್ಡ ಸಾಹುಕಾರರ ಮನೆಯ ಖರ್ಚು ತಗಲುತ್ತದೆ. [illegible] ಅನಾರೋಗ್ಯದ ದೆಸೆಯಿಂದ ಡಾಕ್ಟರರಿಗೆ [illegible] ಕೊಡಲು ಕೈಯಲ್ಲಿ ಕಾಸಿಲ್ಲ. ನಮ್ಮ ಮಾನ-ಮರ್ಯಾದೆಗೆ [illegible] ಪುತ್ರವಾತ್ಸಲ್ಯದ ದಯೆ, ಪ್ರೀತಿ ಮತ್ತು ನನ್ನ ಭ್ರಾತೃಪ್ರೇಮ ಇವು ಯಾವವೂ ಹಣವನ್ನೊದಗಿಸುವದಿಲ್ಲವಂತೇ ನನ್ನಪ್ರಪಂಚವು ಹೀಗಾಗಿದೆ.

ರಾ:—ಹಾಗಾದರೆ ಅವನ ಪತ್ರಕ್ಕೆ ಉತ್ತರವೇನು?

ಸೇ:—ನೀವೇ ಹೇಳಿರಿ. ನಾನೇನೆಂದು ಬರೆಯಲಿ? ಅಥವಾ ಬರೆಯುವ ಬಗೆಯೆಂತು?

ರಾ:—ಅಯ್ಯೋ! ರಾಮದಾಸನು ಎಂಥ ಕಷ್ಟದಲ್ಲಿ ರುವನೋ ಪರಮಾತ್ಮನೇ ಬಲ್ಲ! ಹಾ! ವಿಷಕುಡಿಯಲೂ ಅವನಲ್ಲಿ ಕಾಸಿಲ್ಲವಲ್ಲ!

ಸೇ:—ಸರಿ. ನಾನು ಇದುವರೆಗೆ ಸುಮಾರು 500 ರೂ. ಕಳಿಸಿವೆ. ಆತನು ಆ ಹಣ ತಿರುಗಿ ಕೊಟ್ಟಿದ್ದರೆ. ನನ್ನ ವ್ಯಾಪಾರವನ್ನು ಇನ್ನಿಷ್ಟು ಹೆಚ್ಚಿಸುತ್ತಿದ್ದೆ. ಅಣ್ಣನೆಂಬ ದಾಕ್ಷಿಣ್ಯದಿಂದ ಕೊಟ್ಟ ಧನ ದಾನವಾಗಿಯೇ ಹೋಯಿತು! ಇನ್ನು ಅದರಲ್ಲಿಯ ಒಂದು ಕಾಸೂ ಹಿಂದಿರುಗುವ ಆಶೆ ಇಲ್ಲ.

ರಾ:—ಅಯ್ಯೋ! ಸೇಕರ, ನಿನ್ನ ಹೃದಯವು ಒಂಡೆ ಗಲ್ಲಾಗಿದೆ! ಅಣ್ಣನು ಬೇರೂರಲ್ಲಿ ತಿನ್ನಲು ಅಶನವಿಲ್ಲದೆ ನರಳುತ್ತಿರುವಾಗ ನಿನ್ನ ಹೃದಯ ಕರಗುವದೇ ಇಲ್ಲವಲ್ಲ!

ಸೇ:— ಹೌದಮ್ಮಾ ಹೌದು. ನನ್ನ ಹೃದಯವೇ ಅಂಥದು; ಸಂಸಾರದ ಕಷ್ಟ-ನಿಷ್ಠೂರಗಳನ್ನರಿಯದ ಹೆಣ್ಣು ಹೆಡ್ಡಿನ ಮನಸ್ಸಲ್ಲ. ನಿಮ್ಮಂತೆಯೇ ದಯೆ-ದಾಕ್ಷಿಣ್ಯಗಳ ನ್ನು ತೋರಿಸಿದುದಾದರೆ, ಇಷ್ಟೊತ್ತಿಗೆ ನನ್ನ ಭಂಡಸಾಳೆ ಹಾಗು ಮನೆ ಇವುಗಳುಳಿಯುತ್ತಿದ್ದಿಲ್ಲ. ಬಡ-ಬಗ್ಗರಲ್ಲಿ ದಯೆ ತೋರಿಸಬಹುದು; ಆದರೆ ನಮ್ಮ ರಾಮದಾಸನು ಆ ವರ್ಗಕ್ಕೆ ಸೇರಿದವನಲ್ಲ. ಇಷ್ಟೇ ಅಲ್ಲ, ಆತನು ಅಂಥ ಕಷ್ಟದಲ್ಲೂ ಇಲ್ಲ. ಸ್ಪಷ್ಟವಾಗಿ ಹೇಳಬೇಕೆಂದರೆ, ನಮ್ಮ ರಾಮದಾಸನು ನನಗಿಂತಲೂ ಮಿಗಿಲಾದ ಸುಖ-ಸಮೃದ್ಧಿ ಗಳಿಂದ ಆ ಊರಿನಲ್ಲಿ ಮೆರೆಯುತ್ತಿರುವನು.

ರಾ:—ಸರಿ ಸೇಕರ, ಎಲ್ಲವೂ ನಿನ್ನದೇ. ತಮ್ಮನೇ ಒಂದು ಹಟ ಹಿಡಿದು, ಅಲ್ಲದ ಸಲ್ಲದ ವಿಷಯವಾಗಿ ಮಾತನಾಡಿದರೆ ತಾನೊಬ್ಬ ಮಹಾಬುದ್ಧಿ ಶಕ್ತಿಯುಳ್ಳವನೆಂದಾಗುವದಿಲ್ಲ. ನನ್ನಿಂದ ಏನು ಮಾಡಲು ಸಾಧ್ಯವಿದೆ? ಇಬ್ಬರು ಗಂಡು ಮಕ್ಕಳನ್ನು ಸಾಕಿ ವೃದ್ಧಾಪ್ಯದಲ್ಲಿಯಾದರೂ ಸುಖಜೀವನ ಅನುಭವಿಸುವದೆಂದರೆ, ಅಣ್ಣ-ತಮ್ಮಂದಿರ ತಿಕ್ಕಾಟದಿಂದ ಸಾಯುವ ಗಳಿಗೆಯ ವರೆಗೂ ದುಃಖವೆಂಬುದು ತಪ್ಪುವಹಾಗಿಲ್ಲ. ಹೆಣ್ಣಿನ ಬಾಳೇ ಹಾಗೆ.

ಸೇ:—ಏನಮ್ಮ, ನಿಮ್ಮ ಮನಸ್ಸಿಗೆ ಸಮಾಧಾನವಿಲ್ಲವೇ? ನಿಮಗೆ ಸಂಪೂರ್ಣ ಶಾಂತಿ ಸಿಗಬೇಕಾದರೆ ಈ ಮನೆ, ಆ ಭಂಡಸಾಲೆ, ಅಷ್ಟೇಏಕೆ ಈ ನನ್ನಜೀವವೂ ಕೂಡ ಹೋಗಬೇಕು. ಮೂಢ ಬುದ್ಧಿಯ ಹೆಂಗಸರ ಮನಸ್ಸಿಗೆ ಯಾವ ಸಂಗತಿಯೂ ಒಂದೇ ಆಗಿರುತ್ತದೆ. ಒಳ್ಳೇದು ಮತ್ತು ಕೆಟ್ಟದ್ದು ಯಾವುದೊಂದು ನಿಷ್ಕರ್ಷೆ ಮಾಡುವಷ್ಟು ಹೆಂಗಸರ ಬುದ್ಧಿ ಬೆಳೆಯಲಿಲ್ಲ. ಕರುಣೆಯಿಂದ ಬರೆದ ಪತ್ರವು ವೈರಿಯಿಂದ ಬಂದದ್ದಾದರೂ, ಅದಕ್ಕೆ ಪ್ರತಿ ಉಪಕಾರವನ್ನು ತೋರಿಸುವಂತಹ ಹುಚ್ಚು ಬುದ್ಧಿಯು ನಿಮ್ಮದು. ರಾಮದಾಸನ ಪತ್ರವೆಂದರೆ ಸರಿ. ಪತ್ರಕಂಡ ಕೂಡಲೆ ಹಣಕಳಿಸುವ ಆಲೋಚನೆ ಪ್ರಾರಂಭವಾಗುವದು. ತಿಂಗಳೊಂದಕ್ಕೆ ನಾಲ್ಕು ಪತ್ರಗಳು ಬಂದರೂ ಸರಿಯೇ. ಬಂಗಾರವನ್ನಾದರೂ ಮಾರಿ ಹಣ ಕಳುಹಿಸಿಯೇ ತೀರಬೇಕು. ಹಿರಿಯರ ಆಸ್ತಿ ಮತ್ತು

ಸಮ್ಮಲ್ಲಿದ್ದ ಬಂಗಾರ, 'ಆಭರಣಗಳನ್ನು ನಾನು ಧ್ವಂಸ ಮಾಡಿ ಬಿಟ್ಟೆನೆಂದು ನಿಮ್ಮ ಮನಸ್ಸಿನಲ್ಲಿ ಹೊಳೆಯ ಬಹುದು. ನಾನೊಬ್ಬ ವೈರಿಯು ಹಾಗೆ ಕಾಣಬಹುದು. ಆದರೂ ನಿಮ್ಮ ಮೂಢ ಬುದ್ಧಿಯನ್ನು ಕಂಡು ಬಕಾಸುರ ನಂತಿರುವ ರಾಮದಾಸನು ಆಗಾಗ್ಗೆ ಪತ್ರ ಬರೆಯುತ್ತಿ ರುವನು. ಬರೇ ಒಂದುವರೆ ಆಣೆ ಖರ್ಚಿಸಿ ಒಂದು ಪತ್ರ ಬರೆದು ಬಿಟ್ಟರೆ ಸರಿ. ಎಂಟು ದಿನದಲ್ಲಿಯೇ ಹಣ ನೂರು ಗಟ್ಲೆ ಬರುತ್ತದೆ. ಹೀಗಿರುವಾಗ ಎದೆ ಬಗ್ಗಿಸಿ, ದಣಿದು, ಕೆಲಸ ಮಾಡಬೇಕಾದ ಅವಶ್ಯಕವೇನಿದೆ? ಇವೆಲ್ಲ ದುರಾ ಚಾರಗಳು ಆದದ್ದು ನಿಮ್ಮಿಂದ. ನೀವು ಸಮಯಕ್ಕೆ ಸರಿ ಯಾಗಿ ಹಣ ಕಳಿಸುವುದನ್ನು ನೋಡಿ ಆತನು ಅದನ್ನು ಖರ್ಚಿಸುವ ದುರಭ್ಯಾಸ ಕೈಕೊಂಡಿರುವನು. ಇದರಿಂದ ಆತನು ತನ್ನ ಎರಡನೇ ಹೆಂಡತಿಯನ್ನು ಬಿಡಲಿಕ್ಕನು ವಾದನು. ಆ ಪಾಪ! ಹೆಣ್ಣಿನ ಗೋಳಿಗೆ ನೀವೊಬ್ಬರೇ ಕಾರಣರಲ್ಲದೆ ರಾಮದಾಸನೇನೂ ಅಲ್ಲ. ದುರಭ್ಯಾಸಗಳಿಗೆ ಉತ್ತೇಜನವಿತ್ತು ಧನ ಸಹಾಯ ಮಾಡುವ ತಾಯಿಯು ನಿಜವಾಗಿಯೂ ಮೂಢಳು- ಅಮ್ಮಾ, ಈಗಲಾದರೂ ತಿಳಿಯಿತೇ?

ರಾ:—ಸೇಕರ, ಹಾಗೆಂದರೇನು?

ಸೇ:—ಅದು ಹಾಗೇಯೇ. ಬೊಂಬೈಗೆ ಹೋದವ ರಲ್ಲಿಯ ಬಹು ಜನರ ಜೀವನ ಹಾಗೇಯೇ ಸರಿ.

ರಾ: – ಛೀ! ಛೀ! ಇದೆಂಥ ನಿಷ್ಠೂರ ಮಾತಾಡುವೆ?

ಸೇ:—ನಿಜವಾಗಿಯೂ ನಿಷ್ಠೂರವಲ್ಲ. ನೀವು ಆಗ ಣಿತ ಹಣ ಕಳಿಸಿದ್ದರ ಫಲವಾಗಿ ಆತನಿಂದು ಆಲ್ಲದ ಕೆಲ ಸಕ್ಕೆ ಕಾಲಿಟ್ಟಿರುವನು. ಇದೆಲ್ಲವೂ ನಿಮ್ಮಿಂದಲೇಆದದ್ದು.

ರಾ:—ಮತ್ತೇನು ಮಾಡಲಾದೀತು? ಸೇ ಕ ರ, ಹೆತ್ತ ಕರುಳಲ್ಲವೇ? ಹಣವೆಂದು ಬೇಡುತ್ತಿರಲವಾಗ ನಾನು ಹೇಗೆ ಕಳಿಸದಿರಲಿ? ಬಾಲ್ಯದಿಂದಲೂ ಸಾಕಿ ಸಲು ಹಿದ ಆವನು ನಿನ್ನಂತೆಯೇ ಮಗನಲ್ಲವೇ? ನೀನೇನೋ ಆತನನ್ನು ಅಣ್ಣನೆಂದು ಪರಿಗಣಿಸದಿದ್ದರೂ ನಾನೆಂದಿಗೂ ಹಾಗೆ ಭಾವಿಸಲಾರೆನು.

ಸೇ:—ಅದೆಲ್ಲ ಸರಿಯಮ್ಮಾ. ನೀವು ಅನ್ನುವಂತೆ ನಾನೂ ರಾಮದಾಸನೂ ನಿಮ್ಮ ಮಕ್ಕಳಾದರೆ, ಆತನೂ ನನ್ನಂತೆಯೇ ದುಡಿಯಬೇಕಲ್ಲವೇ? ಬಿ. ಎ. ವರೆಗೆ ಕಲಿ ತದ್ದು ಸನಾಯಿತೋ ಏನೋ? ಆ ಮೂರ್ಖನಿಗೆ ವಿದ್ಯೆ ಕಲಿಸುವಬದಲು ನನಗಾದರೂ ಓದಿಸಿದ್ದರೆ ನನ್ನ ಆದೃಷ್ಟ ವನ್ನೇನೆಂದು ಹೇಳಲಿ? ರಾಮದಾಸ ನಿಜವಾಗಿಯೂ ನನ್ನ ಅಣ್ಣನೆಂದು ಮನಸ್ಸಿನಲ್ಲಿ ಒಪ್ಪಬೇಕು. ಆದರೆ ಬಾಯಲ್ಲಿ ಅಥವಾ ಮಾತಿನಲ್ಲಿ ಒಪ್ಪಲು ಮನಸ್ಸೇನೂ ಬಿಡುವದಿಲ್ಲ. ನಾನು ಮನಸ್ಸಿನಲ್ಲಾದರೂ ಆತನನ್ನು ಅಣ್ಣನೆಂದು ಒಪ್ಪಿ ಕೊಳ್ಳುತ್ತೇನೆ; ಆದರೆ ರಾಮದಾಸ ಖಂಡಿತವಾಗಿಯೂ ನನ್ನನ್ನು ತಮ್ಮನೆಂದು ಎಣಿಸುವದೇ ಇಲ್ಲ. ಆದುದರಿಂದ ಇದುವರೆಗೆ ನಮ್ಮಲ್ಲಿರುವ ಪ್ರೀತಿ-ವಿಶ್ವಾಸಗಳೆಲ್ಲ ಇಂದಿಗೆ ಮುಗಿದು ಹೋದವು. ಕುಟುಂಬಕ್ಕೇ ಕಳಂಕಪ್ರಾಯ

ನಾದ? ರಾಮದಾಸನನ್ನು ಅಣ್ಣನೆಂದು ಹೇಗೆ ತಾನೇ ಹೇಳಲಿ? ಜನಾಂಗದೊಡನೆ ನನ್ನ ಮುಖವನ್ನು ಹೇಗೆ ತೋರಿಸಲಿ? ಇಂತಹ ಮನುಷ್ಯನು ಈ ಲೋಕದಲ್ಲಿ ಜನಿಸದೇ ಇರುತ್ತಿದ್ದರೆ ಎಷ್ಟು ಒಳ್ಳೇದಿತ್ತೋ ಅದರ ಪ್ರಯೋಜನ ಹೇಳಿ ತೀರದು. ಅದಂತೂ ಇರಲಿ. ಅವನ ಪತ್ರಕ್ಕೆ ಪ್ರತ್ಯುತ್ತರ ಬರೆಯುವ ಬಗ್ಗೆ ನಿಮ್ಮ ಆಲೋಚನೆ ಏನು? ಒಮ್ಮೆ ಅದರ ವಿಷಯ ಮಾತೆತ್ತಿ, ಈಗ ಸುಮ್ಮನಾದಿರಲ್ಲಾ?

ರಾ:—ಮತ್ತೇನು ಮಾಡುವುದು? ನಿನ್ನಿಂದ ಹಣ ಕಳಿಸಲು ಅಸಾಧ್ಯವಾದರೆ ಮತ್ತೇನೆಂದು ಹೇಳಲಿ? ನಿನಗೆ ಮನಸ್ಸಿದ್ದರೆ ಅಣ್ಣನ ಮೇಲೆ ಪ್ರೀತಿಯಿಟ್ಟು ಆದಷ್ಟು ಸಹಾಯ ಮಾಡು. ಈಗ ನನ್ನಲ್ಲಿ ಒಂದು ಕಾಸು ಕೂಡ ಇಲ್ಲ. ದೇವರ ದಯೆಯಿಂದ ನಿನಗೆ ಒಳ್ಳೆಯ ಲಾಭವಾಗುತ್ತದೆ. ಆದರಿಂದ ಸ್ವಲ್ಪವನ್ನು ಕಳಿಸಿದರೆ ಇನ್ನು ಮುಂದಿನ ತಿಂಗಳಲ್ಲಿ ನಿನಗೆ ಇನ್ನೂ ಸ್ವಲ್ಪ ಹೆಚ್ಚೇ ಸಿಕ್ಕೀತು.

ಸೇ:—ಹೌದು, ಲಾಭಕ್ಕೇನೂ ಕಡಿಮೆ ಇಲ್ಲ. ದೇವರ ದಯೆ ನನ್ನ ಮೇಲಾಯ್ತು, ಸಿಕ್ಕಿದ ಲಾಭವನ್ನು ತಿಂದು ಸಾಯಲು ರಾಮದಾಸನಾದ. ಇದು ನಿಮ್ಮ ಒಳ್ಳೆಯ ಪಂಚಾಯತಿಕೆ.

ರಾ:—ನನ್ನಲ್ಲಿ ಸ್ವಲ್ಪವಿದ್ದದಾದರೂ ಕಳಿಸುತ್ತಿದ್ದೆ; ಆದರೆ ಏನು ಮಾಡಲಿ? ನಾನು ಸೂರ್ಯನೊಂದಿಗೆ ಪ್ರಯಾಣ ಮಾಡುತ್ತಲಿದ್ದೇನೆ. ಹುಣ್ಣಿವೆಯ ದಿನ ಮಾಂ

ಜಾನೆಗೆ ಸೂರ್ಯೋದಯವಾದಂತೆ ತಾನು ಈ ಪ್ರಪಂಚ
ದಲ್ಲಿ ಜನಿಸಿ, ನಿದಾನವಾಗಿ ಬಿಸಿಲಿನ ತಾಪವನ್ನು ವಿಸ್ತರಿ
ಸಿದಂತೆ, ತಾನೂ ತನ್ನ ವರ್ಚಸ್ಸನ್ನು ಬೀರಿ ನಡು ಮಧ್ಯಾ
ನದ ಸೂರ್ಯನ ಅತಿಯಾದ ತಾಪವು ಇಡೀ ಪ್ರಪಂಚ
ವನ್ನೇ ಆವರಿಸಿರುವಂತೆ, ತನ್ನ ಯೌವನದ ಕೀರ್ತಿಯನ್ನು
ಪ್ರದರ್ಶಿಸಿ, ಕೊನೆಗೆ ಸಿದಾನವಾಗಿ ಅಸ್ತಮಿಸುವನೋ
ಹಾಗೆ ವೃದ್ಧಾಪ್ಯದಿಂದಾಗಿ ನಿರ್ಬಲಳಾಗಿ ಸೂರ್ಯನೊ
ಡನೆ ಅಸ್ತಮಿಸಲು ಸಮಯ ಕಾಯುವೆನು. ಆ ಸಮಯ
ದಲ್ಲಿ ಸೂರ್ಯನನ್ನು ಬದಿಗೊತ್ತಿ ಚಂದ್ರನು ತನ್ನ ಸೋಗ
ಸಾದ ಬೆಳಕನ್ನು ಕೆಡಹುವಂತೆ, ನೀನು ನನ್ನನ್ನು ಬದಿ
ಗೊತ್ತಿ ತನ್ನದೇ ಆಗಬೇಕೆಂದು ಪ್ರಯತ್ನಿಸುತ್ತೀ. ನಾನು
ಹೇಗೂ ನಿರ್ಬಲಳಾಗಿರುವೆನು. ಇನ್ನು ನನ್ನಿಂದ ಯಾವ
ಕೆಲಸವೂ ಆಗುವಂತಿಲ್ಲ. ನೀನು ನಿನ್ನ ಮನ ಬಂದಂತೆ
ವರ್ತಿಸು.

ಸೀ:— ಲೋಕದ ರೀತಿಯೇ ಹಾಗಲ್ಲವೆ? ಮನು
ಜನು ಬಾಲ್ಯದಲ್ಲಿ ಅಲ್ಪ ಬುದ್ಧಿಯವನಿರುವನು; ಪ್ರೌಢಾ
ವಸ್ಥೆಯಲ್ಲಿ ವಿಕಾಸ ಬುದ್ಧಿ-ಶಕ್ತಿಯುಳ್ಳವನಾಗುತ್ತಾನೆ;
ಹಾಗು ವೃದ್ಧಾಪ್ಯದಲ್ಲಿ ಮಕ್ಕಳಂತೆ ಮತ್ತೆ ಬುದ್ಧಿಶೂನ್ಯ
ನಾಗುವನು. ಅದರಂತೆಯೇ ನೀವಿಂದು ನಿಮ್ಮ ಮುಪ್ಪಿ
ನಲ್ಲಿ ಮಕ್ಕಳಾಟಿಕೆಯಂತೆ ರಾಮದಾಸನಿಗೆ ಹಣ ಕಳಿಸಿ,
ಅವನನ್ನು ದುರ್ಮಾರ್ಗಕ್ಕೆ ಹಚ್ಚಿರುತ್ತೀರಿ.

ರಾ:—ಸರಿ-ಸರಿ. ಮುಪ್ಪಿನಲ್ಲಿ ಬುದ್ಧಿಯಿಲ್ಲ; ಆದರೆ

ಯೌವನದಲ್ಲದು ತುಂಬಿ ತುಳುಕುತ್ತದೆ. ಆದ್ದರಿಂದಲೇ ನಿನ್ನಲ್ಲಿ ದ್ವೇಷವಿರುವುದು; ಪ್ರೇಮ ಮಾತ್ರ ಇಲ್ಲವೇ ಇಲ್ಲ.

ಸೇ:—ನನ್ನಲ್ಲಿರುವ ದ್ವೇಷದಿಂದಲೇ ನಾನಿಂದು ಈ ಭಂಡಶಾಲೆಯನ್ನುಳಿಸಿಕೊಂಡು ನನ್ನ ಕುಟುಂಬವನ್ನು ಸಂರಕ್ಷಿಸುತ್ತಿರುವೆನು. ನಿಮ್ಮಂತೆ ದೊಡ್ಡಿಸ್ತಿಕೆಯಿಂದ ರಾಮದಾಸನಿಗೆ ಮತ್ತೆ ಮತ್ತೆ ಹಣ ಕಳಿಸಿದ್ದರೆ ಇಂದು ನನ್ನ ಆವಸ್ಥೆ ಏನಾಗುತ್ತಿತ್ತೋ ಯಾರು ಹೇಳಬೇಕು? ಆತ ನಿಮ್ಮ ಮಿತಿಮೀರಿದ ಉದಾರ ಮನಸ್ಸನ್ನು ಪರೀಕ್ಷಿಸಿ, ನಿಮ್ಮಲ್ಲಿಯ ಸರ್ವಸ್ವವನ್ನೂ ಅಪಹರಿಸಿ, ಹೆರವರ ಉಪ್ಪರಿಗೆಯ ಮೇಲೆ ಕುಳಿತು ಪರಿಮಳವನ್ನು ಸೇವಿಸುತಲಿದ್ದಾನೆ. ನಿಮ್ಮಲ್ಲಿರುವ ದಯೆಯೇ ನಿಮಗೆ ಮೋಸಕೊಟ್ಟಿದೆ.

ರಾ:— ನಿನಗೆ ಹಣದ ಅವಶ್ಯಕತೆಯಿಲ್ಲವಷ್ಟೇ ಸೇಕರ? ಆದರೆ ಅವನಿಗೆ ಹಾಗಲ್ಲ. ಉದ್ಯೋಗವಿಲ್ಲದೆ ತಿರುಗುವವನಿಗೆ ಕೂಳಿಗೇನು ಗತಿ? ನೀನೇ ಯೋಚಿಸು. ತಂದೆಯ ಆಸ್ತಿಯನ್ನು ಒಬ್ಬನೇ ತಿಂದು ತೇಗಿದನೆಂದು ನಿನ್ನ ಹೃದಯದಲ್ಲಿ ಬೆಂಕಿ ಬಿದ್ದಿರುವುದಲ್ಲವೇ ಸೇಕರ? ದೇವರ ದಯೆಯಿಂದ ನೀನು ಆದರ ಇಮ್ಮಡಿಯಷ್ಟು ಗಳಿಸಬಹುದು.

ಸೇ:—ಅದೆಲ್ಲಾ ಸರಿ. ನನ್ನ ಪಾಲಿಗೆ ದೇವರ ದಯೆ ಯಥೇಷ್ಟ ಬಿದ್ದುಹೋಗಿದೆ. ಲೋಕದಲ್ಲಿ ಇದೇ ರೀತಿ ನಡೆಯುತ್ತಿದ್ದುದಾದರೆ ಅಣ್ಣ-ತಮ್ಮಂದಿರ ಜಗಳದಿಂದ ಎಲ್ಲೆಲ್ಲಾ ಅಶಾಂತತೆಯು ತುಂಬುತ್ತಿತ್ತು. ನಿಮ್ಮಂತಹ

ದಯಾಪರ ಮನದವರಿಪ್ಪರೆ, ನಮ್ಮ ರಾಮದಾಸನಂತಹ ಬಕಾಸುರನು ಇಡಿ ಲೋಕವನ್ನೇ ಧ್ವಂಸ ಮಾಡಿ ಬಿಡು ತ್ತಿದ್ದನೇನೊ ಹೇಳಲಾಗದು. ದಯೆತೋರಿಸುವದು ಇಂತ ಹರಿಗಲ್ಲ. ಕೈ ಕಾಲುಗಳಿಲ್ಲದ ಬಡ ಪಾಪಿಗಳಲ್ಲಿ ದಯೆ ದೋರಿದರೆ ಪುಣ್ಯವಾದರೂ ಲಭಿಸೀತು. ತಮ್ಮ ಹಣ ವನ್ನು ಪರರಿಗರ್ಪಿಸುವದರಿಂದೇನು ಪ್ರಯೋಜನ?

ರಾ:—ಪರರು, ಪರರು ಎಂದು ಆಗಾಗ್ಗೆ ಅನ್ನುವೆ ಯಲ್ಲ? ರಾಮದಾಸನನ್ನು ಪರಕೀಯನಾಗಿ ಎಣಿಸಬಾರ ದೆಂದು ನಾನು ಈ ಮೊದಲೇ ಹೇಳಲ್ಲವೆ?

ಸೇ:—ರಾಮದಾಸ ಪರಕೀಯನೆಂದು ಅದಾರು ಅನ್ನುವವರು? ಆತ ನಿಜವಾಗಿಯೂ ನಮ್ಮವನೇ; ಆದರೆ ಆತನು ಪರಸ್ತ್ರೀ ಲೋಲುಪನಾಗಿರುವ ವಾರ್ತೆ ಬಂದಿದೆ. ಆದರಿಂದ ಅವನಲ್ಲಿದ್ದ ನನ್ನ ಪ್ರೀತಿ-ವಿಶ್ವಾಸಗಳು ಭಂಗ ಗೊಂಡಿವೆ. ನಮ್ಮ ಹಣದಿಂದಲೇ ಆ ಮೂವರ ಜೀವನ ಸಾಗುತ್ತಿದೆ. ತಾಯಿ-ತಮ್ಮನಿಗಿಂತ ಅವರನ್ನು ಹೆಚ್ಚಾಗಿ ಪ್ರೀತಿಸುತ್ತಿರುವನು. ವಿವಾಹದ ಹೆಂಡತಿಯನ್ನು ತ್ಯಜಿಸಿ ಪರಸ್ತ್ರೀರತನಾದವನವನು. ಈಗಲಾದರೂ ತಿಳಿಯಿತೇ?

ರಾ:—ಅದೇನೊ ನನಗೆ ತಿಳಿಯದು. ರಾಮದಾಸ ಹಾಗೆ ಮಾಡುವನೆಂಬದನ್ನು ನೀನು ಹೇಗೆ ತಿಳುಕೊಂಡೆ?

ಸೇ:—ಅಮ್ಮಾ, ಲೋಕಸ್ಥಿತಿಯನ್ನು ನೀನಿನ್ನೂ ಚನ್ನಾಗಿ ತಿಳಿದಿಲ್ಲ. ಒಬ್ಬ ಮಹಾ ಪುರುಷನು ಒಳ್ಳೆಯ ಕೆಲಸ ಮಾಡಿದರೆ ಅವನ ಕೀರ್ತಿ ನಿದಾನವಾಗಿ ಹರಡು

ಇದೆ; ಅಷ್ಟೇ ಯಾವನೊಬ್ಬನು ಕೆಟ್ಟ ಕೆಲಸಗಳಲ್ಲಿ ನಿರತನಾದ ದುಷ್ಕೀರ್ತಿ ಮಾತ್ರ ಅಲ್ಪಾವಧಿಯಲ್ಲೇ ತ್ರಿಲೋಕಗಳನ್ನು ವ್ಯಾಪಿಸಿಬಿಡುವದು.

ರಾ:—ಲೋಕದವರೆನ್ನುವರೆಂದು ಸಹೋದರನಾದ ನೀನು ನಂಬಿ, ಅಣ್ಣನನ್ನು ನಿಂದಿಸಬಹುದೋ?

ಸೇ:—ನಿಂದಿಸದಿದ್ದರೇನು ಸ್ತುತಿಸಬೇಕೇ?

ರಾ:—ಹಾಗಲ್ಲ; ಮತ್ಸರಿಗಳಾದವರೂ ಹಾಗೆ ಅಲ್ಲದ ಸುದ್ದಿ ಬೀರಿ ಅವಮಾನ ಹೊರಿಸಬಹುದು.

ಸೇ:—ಅಷ್ಟೇ ನಮ್ಮ ರಾಮದಾಸನ ವಿಷಯದಲ್ಲಿ ಯಾವ ಸಂಶಯವನ್ನೂ ತಕ್ಕೊಳ್ಳಲಾಗದು. ನನ್ನ ಆಪ್ತಮಿತ್ರನಾದ ಆನಂದನು ಸ್ವತಃ ಕಂಡು ಪರೀಕ್ಷಿಸಿ ಹಾಗೆ ಬರೆದಿದ್ದಾನೆ. ಅಂದ ಮೇಲೆ ಅದು ಸುಳ್ಳೆಂದು ಹೇಗೆ ತಿಳಿಯಲಿ?

ರಾ:—ಸುಮ್ಮನೆ ಅಣ್ಣನ ಮೇಲೆ ಅಲ್ಲದ ಸಲ್ಲದ ಅವಮಾನವನ್ನು ಹೊರಿಸಬೇಡ. ಈ ನನ್ನ ಜೀವಮಾನದಲ್ಲಿಯೇ ಹಿರಿಯ ಮಗನ ಕಠಿಣಾವಸ್ಥೆ ನೋಡಬೇಕಾಯಿತಲ್ಲ! ನಾನಿನ್ನು ಬದುಕಿರುವದಕ್ಕಿಂತ ಸಾಯುವದೇ ಲೇಸು, ಎಂದೆಂದು ರಾಧೆಯು ಒಳಗೆ ಹೋದಳು. ಅಷ್ಟರಲ್ಲಿ ರಾತ್ರಿಯ ಹನ್ನೊಂದು ಹೊಡೆಯಿತು. ಸೇಕರನೂ ಊಟಕ್ಕೆ ಕುಳಿತ. ಅನ್ನ ಸೇರಲಿಲ್ಲ. ಬಳಿಕ ಮಲಗುವ ಕೋಣೆ ಸೇರಿ ನಿದ್ರಾವಶನಾದನು.

# ಪರಿಚ್ಛೇದ ೨

ಬೆಳಗಾದ ಕೂಡಲೆ ಸೇಕರನು ದಿನಕ್ಕಿಂತ ತುಸ ಬೇಗನೆ ಎದ್ದು, ಬೆಳಗಿನ ಗಂಜಿಯ ಊಟವನ್ನು ಮಾಡಿ ತನ್ನ ಉಡುಪು ಧರಿಸಿಕೊಂಡು ಭಂಡಸಾಲೆಗೆ ಹೊರಟು ಹೋದನು. ತಾಯಿ ರಾಧೆಯು ರಾಮದಾಸನ ಬಗ್ಗೆ ಯೋಚಿಸುತ್ತ ಬಾಗಿಲಲ್ಲಿ ಕುಳಿತು ನಿಟ್ಟುಸಿರು ಗರೆಯು ತ್ತಿದ್ದಳು.

ಸುಮಾರು ಒಂದು ವಾರ ಕಳೆಯಿತು. ಸೇಕರನು ಪತ್ರಕ್ಕೆ ಉತ್ತರವನ್ನಾಗಲಿ, ಹಣವನ್ನಾಗಲಿ ಕಳಿಸಲಿಲ್ಲ. ರಾಮದಾಸನು ಈ ಸಲ ತಮ್ಮನಿಗೆ ಕಾಗದ ಬರೆದು ಏನೂ ಪ್ರಯೋಜನವಾಗಲಿಲ್ಲೆಂದರಿತು ತಾಯಿಗೆ ಬರೆದ. ಅದರಲ್ಲಿರುವುದೂ ಅದೇ ಒಕ್ಕಣೆ. ಕಾಗದ ತಲಪುತ್ತಲೇ ಹಣ ಕಳಿಸಿರಿ, ಎಂದು ಬರೆದಿದ್ದನು. ರಾಧೆಯ ಮನಸ್ಸು ಕರಗಿ ಹೋಯಿತು. ಸೇಕರನು ಆ ವಿಷಯವನ್ನು ಬಿಟ್ಟು ಬಿಟ್ಟಿದ್ದನು. ಕಾಗದ ಬಂದ ಮರು ದಿನ ರಾಧೆ ಸೇಕರಗೆ ರಾಮದಾಸನ ಕಾಗದದ ಬಗ್ಗೆ ತಿಳಿಸಿದಳು. ಸೇಕರನು ತಡೆಯಲಾರದ ಸಿಟ್ಟಿನಿಂದ

ಸೇ:—ಏನು ಆಶ್ಚರ್ಯ! ಹೆಂಡತಿಯ ಆಭರಣ ಕೇಳಿದಂತೆ ತನ್ನ ಹಕ್ಕಿನದೆಂಬಂತೆ ತಾಯಿಯ ಆಭರಣ ಗಳನ್ನು ಮಾರಿ ಕಳಿಸಬೇಕೆಂದು ಬೇಡುತ್ತಾನೆ. ಇವನೇನು ಬುದ್ಧಿ ಬೆಳೆಯದ ಚಿಕ್ಕ ಬಾಲಕನಲ್ಲ. ತಿಳಿದವನೇ ಹೀಗೆ

ಮಾಡಹತ್ತಿದ ಮೇಲೆ ಸಮುದ್ರಕ್ಕೆ ಬಿದ್ದು ಸಾಯುವದೇ ವಿಹಿತ.

ರಾ:—ಏನು ಸೇಕರ. ರಾಮದಾಸನ ಮರಣದ ಶಿನಹ. ನಿನಗೆ ಸೌಖ್ಯವಿಲ್ಲವೆ? ಅವನ ಸಾವನ್ನು ಆಗಾಗ್ಗೆ ಅದೇಕೆ ಕೋರುವೆ? ಒಬ್ಬನೇ ಒಬ್ಬ ಅಣ್ಣನಿದ್ದರೂ ನಿನಗೆ ಬೇಸರ ಹುಟ್ಟಿತೇ?. ಅಯ್ಯೋ ದೇವರೇ!

ಸೇ:—ಹಾಗಾದರೆ ಹಣ ಕಳಿಸಿರಿ. ಅಭರಣಮಾರಿ ಹಣ ಕಳಿಸಬೇಕೆಂದು ನಿಮ್ಮ ಹಿರಿಯ ಮಗನೇ ತಿಳಿಸಿದ ಮೇಲೆ ಇನ್ನೇನು ಆಕ್ಷೇಪ? ನಾನೇನೂ ನಿಮ್ಮ ಆಸ್ತಿಗೆ ಕಾದುಕೊಂಡಿಲ್ಲ. ಪಿತ್ರಾರ್ಜಿತವೆಲ್ಲವೂ ರಾಮದಾಸನಿಗೇ ಸಲ್ಲಲಿ. ನಿಮ್ಮಲ್ಲಿ ಹಣವಿಲ್ಲೆಂಬದನ್ನು ತಿಳಿದೂ ತಿಳಿದು, ಆಭರಣ ಮಾರಲು ಹುಕುಂ ಕೊಟ್ಟಿರುವನು. ಹಾಗೆಯೇ ಮಾಡಿರಿ. ನನ್ನೊಂದಿಗೆ ಅವನ ಮಾತೆತ್ತ ಬೇಡಿ. ಇನ್ನು ಮುಂದೆ ನನ್ನಿಂದ ಅವನಿಗೆ ಒಂದು ಕಾಸೂ ಸಿಗಲಾರದು. ವಸ್ತ ಮಾರಿ ಮಗನನ್ನು ಉದ್ಧರಿಸಿರಿ. ಹೆಂಗಸರ ಬುದ್ಧಿ ಮೊಣಕಾಲ ಕೆಳಗೆ. ಹೆಂಗಸರು ಅತಿ ಚಂಚಲರು. ಎಂಬ ನಾಣ್ಣುಡಿಗಳು ಸುಳ್ಳಲ್ಲ. ಗೊಲ್ಲ ಹೇಳಿದಂತೆ ಕುಣಿಯುವದು ಮಂಗನ ಕೆಲಸ. ರಾಮದಾಸನು ನಿಮ್ಮನ್ನು ತನ್ನ ಸೂತ್ರದಿಂದ ಕುಣಿಸಿ ಹಣ ಹೀರುತ್ತಿರುವನು. ಒಬ್ಬನ ಜೀವನಕ್ಕೆ ತಿಂಗಳಿಗೆ 100 ರೂಪಾಯಿ ಸಾಲದೆಂದರೇನು ತಾಯಿ? ರಾಮದಾಸನಿಗೆ ಹೊಟ್ಟೆಗಿಲ್ಲದೆ ನರಳುವನೆಂದು ಯೋಚಿಸಬೇಡಿ. ಆತನು ಯಾರನ್ನು ಕೂಡಿಕೊಂಡಿರು

ವನೋ ಅವರ ಕಾಟದಿಂದ ಆಗಾಗ್ಗೆ ಇಲ್ಲಿಗೆ ಹಣಕ್ಕಾಗಿ ಕಾಗದ ಬರೆಯುತ್ತಿರುವನೆಂಬದನ್ನು ನಾನು ಕಣ್ಣಾರೆ ಕಂಡಿರದಿದ್ದರೂ ಊಹೆಯಿಂದ ತಿಳಿದಿದ್ದೇನೆ. ಪರದೇಶ ದಲ್ಲಿ ಪರಸ್ತ್ರೀಲೋಲುಪನಾದ ಮೂರ್ಖ-ಕುಲಗೇಡಿ!

ರಾ:— ಮೂರ್ಖನಾದರೂ ಕುಲಗೇಡಿಯಾದರೂ ನನ್ನ ಉದರದಲ್ಲಿ ಜನಿಸಿದವನನ್ನು ನಾನು ಹೇಗೆ ತಾನೆ ಧಿಕ್ಕರಿಸಲಿ? ನಾನು ಜೀವದಿಂದಿರುವ ವರೆಗೂ ಆತನಿಗೆ ಹೇಗಾದರೂ ಮಾಡಿ ಹಣ ಕಳಿಸಲೇ ಬೇಕು, ಎಂದಳು.

---

## ಪರಿಚ್ಛೇದ ೩

ಮತ್ತೆ ಕೆಲವು ದಿನಗಳು ಕಳೆದವು. ರಾಧೆಯು ಮೊದಲು ಅಡವಿಟ್ಟಿದ್ದ ವಸ್ತುಗಳನ್ನು ಬಿಡಿಸಿ ತರುವ ಬದಲು. ಈ ಸಲ ಅವುಗಳನ್ನು ಮಾರಿ, ಉಳಿದ ಹಣವನ್ನು ರಾಮದಾಸನಿಗೆ ಕಳಿಸಿದಳು. ಅದು ತಲ್ಪಿದ್ದಕ್ಕೆ ಆತನಿಂದ ರಾಧೆಗೆ ಉತ್ತರ ಕೂಡ ಬರಲಿಲ್ಲ! ಹಣ ದೊರೆತ ಮೇಲೆ ರಾಮದಾಸ ಅಂತಸ್ತಿನಿಂದ ಕೆಳಗಿಳಿಯಲೇ ಇಲ್ಲ. ಹೀಗೆ ಸುಮಾರು ಎರಡು ತಿಂಗಳು ಕಳೆದವು. ಇನ್ನು ತಾಯಿಯ ಹತ್ತಿರ ಹಣವಿಲ್ಲೆಂದು ತಿಳಿದು, ಆವಳಿಗೆ ಕಾಗದ ಬರೆ ಯುವದನ್ನೇ ಬಿಟ್ಟುಬಿಟ್ಟ. ಶೇಕರನಿಗೆ ಆತನ ವ್ಯಥೆಯೇ ಇರಲಿಲ್ಲ. ಆತನಿಗೆ ಇದುವರೆಗೆ ಕೊಟ್ಟಹಣದ ಗತಿ ಏನು ಎಂದು ಚಿಂತಿಸುತ್ತಿದ್ದ. ರಾಧೆ ಮಾತ್ರ ಪುತ್ರವಾತ್ಸಲ್ಯ

ಇಂದ ಸದಾ ಕೊರಗಹತ್ತಿದ್ದಳು. ಹೀಗಿರುವಾಗ ರಾಮ ದಾಸನನ್ನು ಪ್ರತ್ಯಕ್ಷ ಕಂಡು ಬರಬೇಕೆಂದು ಸೇಕರ ನಿರ್ಧ ರಿಸಿ, ತನ್ನ ಭಂಡಸಾಲೆಯನ್ನು ತನ್ನ ಅಳಿಯನ ಸ್ವಾಧೀನ ಪಡಿಸಿದನು. ಬೊಂಬೈಪಟ್ಟಣದ ಶೋಭೆ ನೋಡಿ ಬರುವೆ ನೆಂದು ಹೇಳಿ ಹೊರಟೇ ಹೋದ. ಅಲ್ಪಾವಧಿಯಲ್ಲೇ ಆ ಊರು ಸೇರಿದ. ಹೊಸಬನಾದ ಸೇಕರನಿಗೆ ರಾಮದಾಸ ನನ್ನಾಗಲಿ, ತನ್ನ ಮಿತ್ರ ಆನಂದನನ್ನಾಗಲಿ ಪತ್ತೆಹಚ್ಚು ವದು ಕಠಿಣವಾಯಿತು. ರಾಮದಾಸನ ಮೊದಲಿನ ಮನೆ ಹುಡುಕಲು ಪ್ರಯತ್ನಿಸಿದ; ಆದರೆ ಎಲ್ಲವೂ ನಿರರ್ಥಕ. ಯಾವಾಗ ಹೋದರೂ ಆತನ ಕೋಣೆಗೆ ಬೀಗವೇ! ಒಂದು ವಾರ ಕಳೆಯಿತು. ಕಡೆಗೆ ಆನಂದನನ್ನು ಹುಡು ಕಲು ಪೇಚಾಡಿದ. ಕಡೆಗೊಮ್ಮೆ ಅವನ ಮನೆ ಸಿಕ್ಕಿತು. ವಿಚಾರವೆಲ್ಲವೂ ಬಯಲಾಯ್ತು. ಆನಂದ ಸೇಕರರಿಬ್ಬರೂ ಸೇರಿ ರಾಮದಾಸನ ಪತ್ತೆ ಹಚ್ಚಲು ತೊಡಗಿದರು. ವಿಳಾ ಸಕ್ಕೆ ಸರಿಯಾದ ರೂಮು ಸಿಕ್ಕಿತು; ಆದರೆ ಅಲ್ಲಿ ಆವನ ಸುಳುವೇ ಇಲ್ಲ. ಇನ್ನು ರಾಮದಾಸ ಎಲ್ಲಿ ಮತ್ತು ಏನು ಮಾಡುತ್ತಿರುವನೆಂಬದನ್ನರಿಯಲು ಅವರಿಬ್ಬರೂ ಆಲೋ ಚಿಸ ಹತ್ತಿದರು.

ಆ ಕಾಲಕ್ಕೆ ರಾಮದಾಸನೇನು ಮಾಡುತ್ತಿದ್ದನೆಂ ಬದನ್ನು ವಾಚಕರೇ ನೋಡೋಣ, ನಡೆಯಿರಿ. ಅಂದರೆ ಈ ಕಥಾಭಾಗವನ್ನು ಮುಂದರಿಸಲು ಸುಲಭವಾಗುವದು. ರಾಮದಾಸನ ಜೀವನದ ಅಂತ್ಯದಲ್ಲಿ ಅವನಿಗುಂಟಾಗುವ

ಭಯಂಕರ ಪರಿಣಾಮದಿಂದ ಯೌವನ ತರುಣ ತರುಣಿ ಯರು ಎಚ್ಚತ್ತು ಒಂದು ಒಳ್ಳೆಯ ಪಾಠವನ್ನು ಕಲಿತರೆ ತಾಗುವವು. ರಾಮದಾಸನು ಎರಡನೇ ಲಗ್ನವಾದ ಕೆಲವು ವಾರಗಳಲ್ಲಿ ಅವನು ದುರ್ನಡತೆಗೆ ಸಿಲುಕ್ಕಿದ್ದನ್ನು ಕಂಡು ಪಾಪ! ಆ ಕೈ ಹಿಡಿದ ಹೆಣ್ಣು ತವರು ಮನೆಗೆ ಪಲಾಯನ ಮಾಡಿದಳು ಮೊದಲಿದ್ದ ಮಾಳಿಗೆಯನ್ನು ಬಿಟ್ಟು ಬೀದಿ ಬಸಪ್ಪನಂತೆ ಬೀದಿ ಬೀದಿಗಳಲ್ಲಿ ತಿರುಗಾಡ ಹತ್ತಿದನು. ಎಲ್ಲಿಯೂ ಸರಿಯಾಗಲಿಲ್ಲ. ಕೆಲವು ಸುಂದರ ಸೊಬಗಿನ ತರುಣೆಯರ ಕುಡಿ ನೋಟಕ್ಕೆ ಮನಸೋತು ಅವರ ಸೆರೆಯಾಳಾದನು. ಪರಿಚಯ ಹೆಚ್ಚಾಗುತ್ತಲೇ ಅವರೊಂದಿಗೆ ಸೇರಿ ಮೂರನೇ ಅಂತಸ್ತನ್ನು ಏರಿದ. ಪರಿಮಳದ್ರವ್ಯದ ಸುವಾಸನೆಯ ರುಚಿಹಿಡಿಯಿತು. ರಾಮದಾಸನು ಪ್ರತಿ ನಿತ್ಯ ಅಲ್ಲಿಗೆ ಸಂದರ್ಶಿಸಲು ಉಪ ಕ್ರಮಿಸಿದ. ತಾನು ಇಲ್ಲಿ ಹೊಟ್ಟೆಗೆ ಅನ್ನವಿಲ್ಲದೆ ನರಳು ತ್ತೇನೆ, ಹಣವನ್ನು ಕಳಿಸಿರಿ. ಎಂದು ಊರಿಗೆ ಪತ್ರ ಬರೆದ. ಮೊದ ಮೊದಲು ಪತ್ರ ಬರೆದಂತೆ ಹಣವು ೧೦೦ ಗಟ್ಲೆ ಬಂತು. ಹಣ ಬರುತ್ತಲೆ ಹೊಸ ಮೈತ್ರಿಯರೊಡನೆ ನಾಟಕ-ಸಿನೇಮಾ-ಸರ್ಕಸ್ಸ ಮುಂತಾದ ವಿವಿದ ವಿನೋದ ಗಳಿಗೆ ಖರ್ಚ ಮಾಡುತ್ತಿದ್ದ. ಹಣ ಮುಗಿಯುವ ವರೆಗೂ ಮೈತ್ರಿಯರೊಡನೆ ಎಲ್ಲೆಲ್ಲಿಗೋ ವಿಹರಿಸಲು ತೆರಳುತ್ತಿದ್ದ ರಾತ್ರಿಗಳನ್ನೆಲ್ಲ ಅವರೊಂದಿಗೇ ಕಳೆಯುತ್ತಿದ್ದ. ಆಹಹ! ಅದೆಂಥ ಸಂತೋಷ! ಅದೆಷ್ಟು ಉಲ್ಹಾಸ! ಈ ರೀತಿ ಅ

ಬಡ ತಮ್ಮನಿಂದ ಸುಮಾರು ಸಹಸ್ರಾರುರೂಪಾಯಿ ಅಪ ಹರಿಸಿ, ಅನ್ಯರಿಗಾಗಿ ತನ್ನ ಔದಾರ್ಯ ತೋರಿಸಿದನು.

---

## ಪರಿಚ್ಛೇದ ೪

ಹೀಗಿರಲೊಂದು ದಿನ ತಾಯಿಯಿಂದ್ರ ಹಣಬೇಕೆ ಬಹಲಿಲ್ಲೆಂದು ರಾಮದಾಸ ಹೆಚ್ಚಾಗಿ ಚಿಂತಿಸುತ್ತಿದ್ದನು. ಅಷ್ಟರೊಳಗೇ ಅವಳಿಂದ 200 ರೂ. ಬಂದವು. ಕೂಡಲೆ ರಾಜಬೀದಿಯಿಂದ ಹೊರಬಿದ್ದು ಹಿಂದು ಗಲ್ಲಿ ಸೇರಿದನು. ಸುಮಾರು ಅರ್ಧಮೈಲು ತೆರಳಿ ಇನ್ನೊಂದು ಓಣಿಹೊಕ್ಕ. ಸ್ವಲ್ಪ ದೂರ ಹೋಗಲು ಒಂದು ದಿವ್ಯವಾದ ಭವನವು ಫಕ್ಕನೆ ಆತನ ದೃಷ್ಟಿಗೆ ಬಿತ್ತು. ಮೂರು ಅಂತಸ್ತಿನ ಆ ಭವನವು ವಿದ್ಯುದ್ದೀಪಗಳಿಂದ ಪ್ರಜ್ವಲಿಸುತ್ತಿತ್ತು. ರಾಮ ದಾಸನು ನೆಟ್ಟಗೆ ಅಲ್ಲಿಗೆ ಹೋಗಿ ಉಪ್ಪರಿಗೆಯ ಮೆಟ್ಟಿಲು ಗಳಲ್ಲಿ ನಿಂತು ಒಮ್ಮೆ ಹಿಂದಿರುಗಿ ನೋಡಿದ. ಆ ಕಾಲದ ಆತನ ಮುಖಮಂಡಲದ ವರ್ಣನೆಯನ್ನು ಅದೆಷ್ಟುವರ್ಣಿ ಸಿದರೂ ತೀರದು. ಆತನ ತಲೆಗೆ ಜರಿಯ ರುಮಾಲು. ಮೈಯೊಳಗೆ ಥಳಥಳಿಸುವ ಕೋಟು, ಶುಭ್ರವೂ ಅತ್ಯಂತ ನಯವೂ ಆದ ದೋತರವನ್ನುಟ್ಟಿದ್ದನು. ಆ ದೋತರದ ಸ್ವರ್ಣವರ್ಣದ ಅಂಚು ಎದ್ದು ಕಾಣುತ್ತಿತ್ತು. ಅಷ್ಟೆಲ್ಲ ಸಜ್ಜುಗೊಳಿಸಿದ ಆ ದೇಹಕ್ಕೆ ಹುಣ್ಣಿವೆಯ ಚಂದ್ರನಂತೆ ಹೊಳೆಯುವ ಸುಂದರವಾದ ಮುಖ. ಗಿಡ್ಡವಾದ ಮುಂ

ಗುರ ಕೂದಲು. ಮುತ್ತಿನಂತೆ ಸೊಬಗನ್ನು ಕೊಡುವ ಫ್ರೆಂಚ ಕಟ್ಟುಮೀಸೆ. ಕವಿದ ಕತ್ತಲೆಯಲ್ಲಿ ನಕ್ಷತ್ರಗಳಂತೆ ಥಳಥಳಿಸುವ ಕಣ್ಣುಗಳು. ಹಣೆಯಲ್ಲಿ ಮನ ಮೋಹಕ ತಿಲಕ. ಇಷ್ಟೆಲ್ಲ ಆಡಂಬರದಿಂದ ಕೂಡಿಕೊಂಡ ರಾಮ ದಾಸ ನೋಡುವವರಿಗೆ ಮಹಾ ಪುರುಷನಂತೆ ತೋರುತ ಲಿದ್ದ. ಆತನು ಮೆಲ್ಲನೆ ಮೆಟ್ಟಲುಗಳನ್ನೇರಿದ. ಮೂರನೆ ಅಂತಸ್ತಿನಲ್ಲಿ ಬಹು ಗಲಾಟೆ ಕೇಳುತ್ತಿತ್ತು. ನಡುನಡುವೆ ಜಯಘೋಷವೂ ಆಗುತ್ತಿತ್ತು. ಇಂಪ್ರದನಿಯ ಸಂವಾದ ಎಂದು ಅಂತಸ್ತೇ ಮಗುಚಿ ಬೀಳುವಂತಿತ್ತು. ಆ ಪ್ರಸಂಗ ಇಲ್ಲಿ ರಾಮದಾಸ ಮೇಲಕ್ಕೇರಿ ಹೋದನು. ತನ್ನ ಜೇಬಿ ನಲ್ಲಿ 200 ರೂ. ಇದ್ದುದರಿಂದ ಅವನೊಳ್ಳೇ ದುಡುಕಿ ನಿಂದಲೆ ಬಂದ. ಬಾಗಿಲಿಗೆ ಹೋಗಿ ಕದ ನೂಕಿದ. ಅಗಳಿ ಹಾಕಿತ್ತು. ಯಾರೇ, ಕದ ತೆರೆ, ಎಂದ ಕೂಡಲೆ ಒಳಗಿನ ಶಬ್ದ ವಡಗಿತು. ರಾಮದಾಸ ನಿತ್ಯಕ್ರಮದಂತೆ ಚಂದ್ರಾ ವತಿಯನ್ನೂ ಪಾರ್ವತಿಯನ್ನೂ ಕರೆದು ಬೇಗನೆ ಬಾಗಿಲು ತೆರೆಯಲು ಹೇಳಿದ. ಅವನ ಕಾಲು ಹೊರಗಡೆಯಲ್ಲಿ ನಿಲ್ಲ ದಾದವು. ಸೂಲಗಿತ್ತಿಯರ ಮಾಳಿಗೆಯೆಂದರೆ ಡೊಂಬರ ಆಟದ ಐದು ಪೆಟ್ಟಿಗೆಗಳಂತೆ. ಅದಕ್ಕೆ ಹಲವು ಬಾಗಿಲು ಗಳಿರುವವು. ಅವು ಎಲ್ಲಿರುತ್ತವೆಂಬದು ಅವರದವರಿಗೇನೆ ಗೊತ್ತು. ಹಾಗಿರುವಾಗ ಒಳಗಿರುವ ಮಹಾ ಪುರುಷನು ಇನ್ನೊಬ್ಬನ ಆಗಮನವನ್ನು ಅರಿತು, ವಿನೋದಕ್ಕೆ ಹೆಚ್ಚು ಸಮಯ ಹೆಚ್ಚವಾಡಿ ಇಂದಿನ ಹಣ ಉಳಿಸಿಕೊಂಡ

ನೆಂದೂ, ಹಿಮ್ಮೊಮ್ಮೆ ಇಂದಿನ ಸಂತೋಷವನ್ನೇ ಕಳೆದು ಕೊಂಡೆನಲ್ಲ, ಎಂಬ ಬೇಸರದಿಂದಲೂ ಇನ್ನೊಂದು ಬಾಗಿಲದಿಂದ ಹೊರಬಿದ್ದನು. ರಾಮದಾಸ ಹೊರಗೆ ನಿಂತು ನಿಂತು ಸೋತು ಹೋದ. ಅವನ ಮನಸ್ಸೆಲ್ಲ ಹಳಗೆಳೆಯು ಹತ್ತಿತ್ತು. ಪುನಃ ಪುನಃ ಅವರನ್ನು ಕೂಗಿ ಬಾಗಿಲು ತೆರೆಯಲು ತಿಳಿಸಿದರೂ ಚಂದ್ರಾವತಿ-ಪಾರ್ವತಿಯರು ವಿಲಂಬ ಮಾಡಿದರು. ಇವನು ರಾಮದಾಸನೆಂದು ತಿಳಿದರೂ ಸಹ ಹಣವಿಲ್ಲೆಂದು ಎರಡು ದಿನ ಮುಂಚೆಯೇ ಹೊರಟಿದ್ದು ಹೋಗಿದ್ದರಿಂದ ಅವರು ಹಣದ ವಿಚಾರಕ್ಕೆ ತೊಡಗಿದರು ಪಾರ್ವತಿ ಬಾಗಿಲ ಬಳಿಗೆ ಬಂದು, ರೊಕ್ಕಪ್ಪನಿದ್ದರೆ ಚಿಕ್ಕಪ್ಪನಿಗೆ ಪ್ರವೇಶ,ಎಂದಳು. ರಾಮದಾಸ ಇಂದಿನವುಟ್ಟಿಗೆ ಹೆದರುವಂತಿರಲಿಲ್ಲ. ರೊಕ್ಕಪ್ಪನಿಲ್ಲದೆ ಚಿಕ್ಕಪ್ಪ ಬರಲಾರ; ತಿಳಿಯಿತೇ, ಎಂದು ನಗೆಮೊಗದಿಂದ ನುಡಿದನು. ಅನಂತರ ಅವರು ಕೆಲವು ಹಾಸ್ಯಾಸ್ಪದ ಮಾತನ್ನು ಆಡಿದರು. ಚಂದ್ರಾವತಿ-ಪಾರ್ವತಿಯರ ಮನಸ್ಸಿಗೆ ಆನಂದವಾಯಿತು. ಅವರು ಆ ಕೂಡಲೆ ಕನ್ನಡಿಯ ಬಳಿಗೆ ಹೋಗಿ ಮುಖಕ್ಕೆ ಪೌಡರ ಹಚ್ಚಿಕೊಂಡು, ಮೂಗನ್ನೇ ಭೇದಿಸುವಂತೆ ಪರಿಮಳದೆಣ್ಣೆಯನ್ನು ತಲೆಗೆ ಹಾಕಿ ಸವರಿ, ತಮ ತಮಗೆ ಬೇಕಾದ ಆಡಂಬರಗಳನ್ನು ಧರಿಸಿಕೊಂಡು ರಾಮದಾಸನನ್ನೆದುರಿಸಲು ಬಂದರು. ರಾಮದಾಸನಿಗೆ ಅಷ್ಟು ವೇಳೆ ಕಾಯುವದೆಂದರೆ ಒಂದು ವರ್ಷ ಕಾದಂತಾಯ್ತು. ಹೇಗೂ ಸಹಿಸಿದ. ಪಾರ್ವತಿ ಬಾಗಿಲದಗಳೆ ದೂಡಿ ಕದ ತೆರೆದಳು.

ನದಿಯ ಕಟ್ಟೆ ಒಡೆದಾಗ ರಭಸವಾಗಿ ನೀರು ಕೆಳಕ್ಕೆ ಹರಿಯುವ ರೀತಿಯಲ್ಲಿ ರಾಮದಾಸನು ಫಕ್ಕನೆ ಕೋಣೆ ಹೊಕ್ಕು ಪಾರ್ವತಿಯ ಮೈ ಮೇಲೆ ಬೀಳುವಂತಾಯ್ತು. ಆದರೂ ಮರ್ಯಾದೆಯಗೋಸ್ಕರ ಹೇಗೊ ತಡೆಕೊಂಡ. ಈ ದಿನದ ಸೊಬಗೇ ಸೊಬಗು. ದನ ಕಂಡಾಗ ಹುಲಿಯು ಹೇಗೆ ಸಂತೋಷದಿಂದ ಮುಖಮಂಡಲವನ್ನು ಉಬ್ಬಿಸಿ ಮೈ ಮೇಲೆ ಹಾರಲು ಸಮಯ ಹಾರೈಸುತ್ತಿರುವಂತೆ ರಾಮದಾಸನು ತನ್ನ ಮುಖಮಂಡಲವನ್ನು ಉಬ್ಬಿಸಿ ಒಳಕ್ಕೆ ಬರುತ್ತಿದ್ದನು. ರಾಮದಾಸನ ಒನಪಿನ ಉಡುಪು ತೊಡಪುಗಳನ್ನು ನೋಡಿ ಅವರು ಆಶ್ಚರ್ಯಚಕಿತರಾದರು. ತಾವು ಏನು ಮಾಡಬೇಕೆಂಬದನ್ನು ತಿಳಿಯಲಾರದೆ ಅವರಿಬ್ಬರೂ ಮೇಜಿನ ಬಳಿಗೆ ಹೋಗಿ ಅಲ್ಲಿದ್ದ ಪೂಮಾಲೆಯ ತಂದು ಆತನ ಕೊರಳಲ್ಲಿ ಹಾಕಿದರು. ವಸಂತ ಋತುವಿನಲ್ಲಿ ಗಿಡ-ಮರಗಳಿಗೆ ಹೊಸ ಚಿಗುರು ಒಡೆಯುವಂತೆ ಅಂದು ರಾಮದಾಸನನ್ನು ಕಂಡ ಆ ಪಾರ್ವತಿ-ಚಂದ್ರಾವತಿಯರ ಹೃದಯದಲ್ಲಿ ನವ ಪ್ರೇಮದ ಸೊನೆಯೊಡೆಯಿತು. ಯಾಕಂದರೆ ಆಗ ರಾಮದಾಸನಲ್ಲಿ ಸಾಕಷ್ಟು ಹಣವಿದೆ, ಎಂಬದು ಅವರಿಗೆ ತಿಳಿದಿತ್ತು. ಅದರಿಂದ ಅವರ ಮನಸ್ಸು ಆ ಹಣ ಸೆಳೆಯುವದಕ್ಕೆ ತೊಡಗಿತು. ಕೂಡಲೆ ಅವರು ಆತನನ್ನು ಕುರ್ಚಿಯ ಮೇಲೆ ಕುಳ್ಳಿರಿಸಿ, ಅವನಿಗೊಂದು ಸಿಗರೇಟ ತಂದುಕೊಟ್ಟರು; ಮತ್ತು ಅಲ್ಪಾವಧಿಯಲ್ಲೇ ಬಿಸಿ ಬಿಸಿ ಚಹ, ಬಗೆಬಗೆಯ ತಿಂಡಿ-ತಿನಸು, ತರತರದ

ಮಿಠಾಯಿ ಮೇಜಿನ ಮೇಲೆ ಬಂದಿಳಿದವು. “ಸೆಕೆಯಾಗು ತ್ತಿದೆಯಾದರೆ ಆ ನಿಮ್ಮ ಕೋಟನ್ನು ತೆಗೆದುಬಿಡಿರಿ.” ಎಂದು ಒಯ್ಯಾರದಿಂದ ಪಾರ್ವತಿ ಅಂದಳು.

ಇಂದಿನಂತಹ ಆದರೋಪಚಾರಗಳು ರಾಮದಾಸ ನಿಗೆ ಇದುವರೆಗೂ ನಡೆದಿರಲಿಲ್ಲ. ಅದರಿಂದ ಆತನಿಗೆ ಆಶ್ಚರ್ಯವಾಯಿತು. ಬೇಕಾದಷ್ಟನ್ನು ತಿಂದು, ಚಹ ಕುಡಿದು “ಒಡ್ಡೋಲಗ ಪ್ರಾರಂಭವಾಗಲೆ”ಂದು ಅಪ್ಪಣೆ ಕೊಟ್ಟ. ಪಾರ್ವತಿ ಚಂದ್ರಾವತಿಯರು ರಾಮದಾಸನ ಮುಂದೆ ರತ್ನಗಂಬಳಿಯ ಮೇಲೆ ಕುಳಿತು ಇಂದು ಬಹಳ ಶೋಕಿನಿಂದ ಬಂದಿರುವ ರಾಮದಾಸನನ್ನೇ ನೋಡುವುದ ರಲ್ಲಿ ಮಗ್ನರಾಗಿದ್ದರು. ಅವರಂತೆಯೇ ರಾಮದಾಸನೂ ಕೂಡಾ ಅವರಿಬ್ಬರೊಳಗಿನ ಸೌಂದರ್ಯವನ್ನು ತನ್ನಲ್ಲಿ ಹೋಲಿಸ ನೋಡಹತ್ತಿದ್ದನು.

---

## ಪರಿಚ್ಛೇದ ೫

ಸ್ತ್ರೀಯರ ಸೌಂದರ್ಯಕ್ಕೆ ಎಣೆಯೇ ಇಲ್ಲ. ಚಂದ್ರ ಪ್ರಕಾಶವು ಸರಾಗವಾಗಿ ಹಾದು ಹೋಗುವಂತಹ ಬೆಸ್ತರ ಬಲೆಯಂಥ ತೆಳ್ಳಗಿನ ಅಂದ ಚಂದವಾದ ಸೀರೆಗಳನ್ನು ಅವರೀರ್ವರೂ ಉಟ್ಟುಕೊಂಡಿದ್ದರು. ಅತ್ಯುತ್ತಮವಾದ ಕೆಂಪು ಸಿಲ್ಕ್ಬಟ್ಟೆಯ ರವಕೆಗಳನ್ನು ತೊಟ್ಟಿದ್ದರು. ಅದ ರಲ್ಲಿ ಅಲ್ಲಲ್ಲಿ ಶುಭ್ರವಾಗಿ ಪ್ರಕಾಶಿಸುವಂತಹ ಮುತ್ತು

ಗಳು ಕುಳ್ಳಿರಿಸಿದ್ದರು. ಬಳೆಗಳಂತೂ ಸಪ್ತ ವರ್ಣಗಳಿಂದ ಅಲಂಕರಿಸುತ್ತಿದ್ದವು. ಬಗೆಬಗೆಯ ಆಭರಣಗಳು ರತ್ನ ಮುತ್ತು ಮೊದಲಾದವುಗಳಿಂದ ಕೂಡಿದ್ದು ಕಂಠಗಳಲ್ಲಿ ನೇತಾಡಿ, ವಿಶಾಲವಾದ ಎದೆಯನ್ನು ಮುಚ್ಚಿಬಿಟ್ಟಿದ್ದವು. ಅಮವಾಸ್ಯೆಯ ರಾತ್ರಿಯಲ್ಲಿ ನಕ್ಷತ್ರಗಳು ಥಳಥಳಿಸುವಂತೆ ಅವರ ಮುಖಮಂಡಲದಲ್ಲಿ ಅಲ್ಲಲ್ಲಿ ಕೆಲವು ಧಾತುಗಳು ಪ್ರಜ್ವಲಿಸುತ್ತಿದ್ದವು. ಕವಿದ ಕಗ್ಗತ್ತಲೆಯಲ್ಲಿ ವಜ್ರಪ್ರಜ್ವಲಿಸುವಂತೆ ಚಿಕ್ಕವಾದ ಕಣ್ಣುಗಳು ಪ್ರಜ್ವಲಿಸಿ, ಮುಖ ಮಂಡಲಕ್ಕೆ ಒಂದು ಬಗೆಯ ಅಲಂಕಾರವನ್ನು ಹುಟ್ಟಿಸುತ್ತಿದ್ದವು. ಕಿವಿಗೆ ಉದ್ದಉದ್ದವಾದಂತಹ ಚಿನ್ನದ ಲೋಹಕಗಳು ನೇತಾಡುತ್ತಿದ್ದವು. ಇವರುಗಳು ಸಾಕ್ಷಾತ್ ಧೇವಲೋಕದಿಂದ ಬಂದ ದೇವತೆಯರಂತೆ ಕಾಣುತ್ತಿದ್ದರು. ಇವರನ್ನು ಕಂಡರೆ ತಂದೆ, ತಾಯಿ, ಹೆಂಡತಿ ಮಕ್ಕಳು, ತಮ್ಮ, ತಂಗಿಯರನ್ನೂ, ಮನೆ ಮಠ, ಆಸ್ತಿಯನ್ನೂ ಬಿಟ್ಟು ಇವರ ಸೌಂದರ್ಯಕ್ಕೆ ಮರುಳಾಗಿ ಇವರ ಸೆರೆಯಾಗುವದರಲ್ಲಿ ಯಾವ ಆತಂಕವೂ ಇರಲಿಲ್ಲ. ಹಾಗೆಂದಮೇಲೆ ನಮ್ಮ ರಾಮದಾಸನು ಇವರ ಬಲೆಯಲ್ಲಿ ಸಿಕ್ಕಿಬಿದ್ದದ್ದು ಅಷ್ಟೇನೂ ವಿಚಿತ್ರವಲ್ಲವಷ್ಟೇ! ಆದರೆ ಹೇರಳ ವಿದ್ಯೆ ಸಂಪಾದಿಸಿ, ಪ್ರಪಂಚದ ಸ್ಥಿತಿಗತಿಯನ್ನು ತಿಳಿದ ಬಳಿಕ ಇಂಥವರ ಕೈಯಲ್ಲಿ ಸೆರೆಯಾಗುವವರು ನಿಜವಾಗಿಯೂ ಶುದ್ಧ ಮೂರ್ಖರೇ ಸರಿ

---

# ಪರಿಚ್ಛೇದ ೬

ರಾಮದಾಸನು ಅವರ ಸಂದರ್ಯಕ್ಕೆ ಮರುಳಾಗಿ ಏನೂ ಸಹಿಸಲಾರದೆ ನರ್ತನ ಮಾಡಲು ತಿಳಿಸಿದ. ನರ್ತನದ ವೇತನ ಪ್ರತ್ಯೇಕ ಸಿಕ್ಕಿತೆಂಬ ಅಭಿಲಾಷೆಯಿಂದ ಬಗೆ ಬಗೆಯ ಸ್ವರಗಳನ್ನು ಸಜ್ಜುಗೊಳಿಸಿ ಅವರು ನರ್ತನಕ್ಕೆ ತೊಡಗಿದರು. ರಾಮದಾಸನುಸಹಾ ಪಿಟೀಲು ಬಾರಿಸಲು ತೊಡಗಿದನು. ಕಡೆಗೆ ತಾನೂ ಅವರೊಂದಿಗೆ ಭಾಗಿಯಾಗಿ ನರ್ತನ ಮಾಡಿದನು. ಸ್ವಲ್ಪ ಸಮಯದಲ್ಲಿಯೇ ಅದನ್ನು ಮುಗಿಸಿದರು. ಅಂದು ನಿತ್ಯದ ಸಮಯಕ್ಕಿಂತ ಒಂದು ತಾಸು ಬೇಗನೆ ನಿದ್ರಾವಸ್ಥೆಗೆ ತೆರಳಬೇಕೆಂದು ಅವರಿಬ್ಬರೂ ಹಟ ಹಿಡಿದರು. ಹತ್ತು ಗಂಟೆ ರಾತ್ರಿಯಾಗುತ್ತಲೆ ನಿದ್ರಾಂಗನೆಯೊಡನೆ ಮೂವರೂ ಸೇರಿಕೊಂಡರು. ಅತ್ತ ಬೆಳಗಾಯಿತು. ರಾಮದಾಸನು ಲಗುಬಗನೇ ಎದ್ದು ತನ್ನಲ್ಲಿರುವ ರೊಕ್ಕಪ್ಪನನ್ನು ಹಲವು ವಿಭಾಗಗಳಾಗಿ ಮಾಡಿ ಅದರಲ್ಲಿ ಒಂದೊಂದು ಪಾಲನ್ನು ಚಂದ್ರಾವತಿಗೂ ಪಾರ್ವತಿಗೂ ಕೊಟ್ಟು ಅಂತಸ್ತಿನಿಂದ ಹೊರಬಿದ್ದನು. ಅಂದು ಅವರ ಸಂತೋಷಕ್ಕೆ ಪಾರವೇ ಇರಲಿಲ್ಲ. ಅಷ್ಟು ವೇತನ ಅವರು ಮತ್ತಾರಿಂದಲೂ ಪಡೆದಿರಲಿಲ್ಲ. ರಾಮದಾಸನು ಹೋಗುವಾಗ ಪಾರ್ವತಿಯು ಅವನ ಹಿಂದೆಯೇ ಬಾಗಿಲ ವರೆಗೆ ಬಂದು "ಇವತ್ತು ಸಂಜೆಗೂ ಬಾರದೇ ನಿಲ್ಲಬೇಡಿರಿ." ಎಂದು ಹೇಳಿ ನಕ್ಕು ಸೆರಗನ್ನು ಮುಖಕ್ಕೆ ಅಡ್ಡ ಹಿಡಿದಳು.

---

# ಪರಿಚ್ಛೇದ ೭

ಪ್ರಪಂಚವೇ ಸ್ತ್ರೀಯರದಾಗಿದೆ. ಲಕ್ಷ್ಮಿಯೇ ಅವರು. ಲಕ್ಷ್ಮಿಯೇ ಅವರಲ್ಲಿ. ಎಲ್ಲ ಪುರುಷರನ್ನು ವಂಚಿಸಿ, ತಮ್ಮ ಸೆರೆಯಲ್ಲಿಡುವದು ಅವರ ಮುಖ್ಯ ಉದ್ದೇಶ. ಪ್ರಿಯ ಓದುಗರೇ, ತಿಳಿದಿರಲ್ಲವೇ ರಾಮದಾಸನ ಜೀವನ? ಎಷ್ಟು ಸೊಗಸಾಗಿ ಮಾತಾಡುತ್ತಾರೆ! ಎಷ್ಟು ಮಮತೆಯಿಂದ ಉಪಚರಿಸುತ್ತಾರೆ! ಎಲ್ಲವೂ ಹಣದ ಪ್ರಪಂಚ! ಹಣವಿದ್ದರೆ ಎಲ್ಲವೂ ಒದಗುತ್ತದೆ. ಪಾಪ! ಆ ಬಡ ತಂದೆ-ತಾಯಿಗಳು ಈತನನ್ನು ಸಾಕಿ, ಹೇರಳ ಧನ ವ್ಯಯಮಾಡಿ ಬಿ. ಎ. ದ ವರೆಗೆ ಕಲಿಸಿದರು. ತಮ್ಮ ಮುದಿಪ್ರಾಯದಲ್ಲಿಯಾದರೂ ಒಂದು ತೊಟ್ಟು ಗಂಜಿ-ನೀರನ್ನು ಕೊಟ್ಟಾನು ಎಂಬ ಭರವಸೆಯಲ್ಲಿ ಅತಿಯಾದ ವಾತ್ಸಲ್ಯದಿಂದ ಬೆಳೆಯಿಸಿದರು; ಆದರೆ ಎಲ್ಲವೂ ನಿಷ್ಫಲ! ತಂದೆಯೊಬ್ಬನು ಇವನ ಐಶ್ವರ್ಯಕ್ಕೆ ಆಶಿಸದೇ ಹೋದ. ತಾಯಿ ಮುದಿಪ್ರಾಯದಲ್ಲಿ ಸುಖಪಡೆಯುವ ಬದಲು ಇದ್ದದ್ದನ್ನೆಲ್ಲಾ ಕಳೆಕೊಂಡು, ಆಭರಣಗಳನ್ನು ಸಹಾ ಮಾರಿ ಮಗನ ಅವಸ್ಥೆಯನ್ನು ಚಿಂತಿಸಿ ಕೊರಗುತ್ತಿರುವಳು. ರಾಮದಾಸನಾದರೋ ಮಾನ-ಮರ್ಯಾದೆ ಇಲ್ಲದ ಕುಲಗೇಡಿ. ತನ್ನ ಸ್ವಂತ ಮಾಳಿಗೆಯಲ್ಲಿ ತಾನೊಬ್ಬನೇ ಇರುವದು ಸರಿಯಲ್ಲವೆಂದರಿತು, ಸುಖ ಆನಂದಗಳಿಗೋಸ್ಕರವಾಗಿ ಹಲಕೆಲವು ಸ್ಥಳಗಳನ್ನು ಸಂದರ್ಶಿಸಲುಪಕ್ರಮಿಸಿದನು. ಕ್ರಮೇಣ

ಒಂದು ಅಂತಸ್ತನ್ನೇ ಕಾಯಂ ಮಾಡಿ, ಊರಿಂದ ಬರುವ ಹಣವನ್ನು ಆ ಸ್ತ್ರೀಯರಿಗೆ ಕೊಟ್ಟು ತಾನು ಸುಖಪಡೆವ. ಹೀಗಾದ್ದರಿಂದಲೇ ನಮ್ಮ ಸೇಕರನಿಗೆ ರಾಮದಾಸನ ಪತ್ತೆ ಹತ್ತದಾಯಿತು. ಮಿತ್ರರನ್ನು ಕಂಡರೆ ತಲೆ ಬಗ್ಗಿಸಿ ಪರಿಚಯವಿಲ್ಲದವರಂತೆ ನಟಿಸುತ್ತಿದ್ದ. ಇವನ ಚರಿತ್ರೆ ಎಲ್ಲರಿಗೂ ಗೊತ್ತಿತ್ತು. ಬೊಂಬೈ ಪಟ್ಟಣದಲ್ಲಿ ಇವನ ಪರಿಚಯವಿಲ್ಲದ ನಾರಿಯರಿರಲಿಲ್ಲ! ರಾಮದಾಸನಿಗೆ ಕೊನೆಯದಾಗಿ ಈ ಕೆಲಸದಲ್ಲಿ ಡಿಗ್ರಿ ಸಿಗುವುದು ಮಾತ್ರ ಬಾಕಿ ಇತ್ತು! ಅಷ್ಟರ ವರೆಗೆ ಅವನು ಪ್ರಖ್ಯಾತಿಯಾಗಿದ್ದನು. ಇದರಿಂದಲೇ ಸೇಕರನು ಬೊಂಬಾಯಿಗೆ ಬರಲು ಕಾರಣ. ಇಷ್ಟರಲ್ಲಿ ಸೇಕರ ಮತ್ತು ಆನಂದನು ಕೂಡಿ ಎಲ್ಲಿಯ ವರೆಗೆ ಹೋದರೆಂಬದನ್ನು ನೋಡೋಣ.

---

## ಪರಿಚ್ಛೇದ ೮

ಸೇಕರನು ಮುಂಬಯಿಯಲ್ಲಿ ಹಲ-ಕೆಲವು ದಿನಗಳನ್ನು ಕಳೆದರೂ ರಾಮದಾಸನ ಪತ್ತೆಯಾಗಲಿಲ್ಲ. ದೂರ ದೂರದಿಂದ ಅವನ ಸುದ್ದಿ ಕೇಳುತ್ತಲೇ ಒಂದು ತಿಂಗಳು ಕಳೆಯಿತು. ಆನಂದನು ಸುಮಾರು ಹತ್ತು ವರ್ಷಗಳಿಂದ ಅಲ್ಲಿಯೇ ವಾಸಿಸಿದವನಾದರೂ ರಾಮದಾಸನ ಪತ್ತೆ ಹಚ್ಚಲು ಸಾಧ್ಯವಾಗಲಿಲ್ಲ. ಹಲಕೆಲವು ನಾರಿಯರ ಉಪ್ಪರಿಗೆಗಳಿಗೆ ಹತ್ತಿಳಿಯಬೇಕಾಯಿತು; ಆದರೆ ಎಲ್ಲಿ ಹೋ-

ದರೂ ರಾಮದಾಸನು ಕಾಣೆಯಾಗಿದ್ದನು. ಒಂದು ದಿನ ಅವರಿಬ್ಬರೂ ಸಂಜೆಗೆ ಸಮುದ್ರಕರಾವಳಿಗೆ ತಿರುಗಾಡಲು ಹೊರಟರು. ಸಮೀಪವೇ ಇರುವ ಒಂದು ಬಂಡೆಯ ಮೇಲೆ ಕುಳಿತುಕೊಂಡು ರಾಮದಾಸನ ಪತ್ತೆ ಹಚ್ಚುವ ವಿಷಯದಲ್ಲಿ ವಿಮರ್ಷೆ ಮಾಡುತ್ತಿದ್ದಾಗ ಅಲ್ಲಿಗೆ ಆನಂ-ದನ ಮಿತ್ರನೊಬ್ಬನು ಬಂದನು. ಅವನೂ ಕೂಡಾ ಕೆಲ ಮಟ್ಟಿಗೆ ರಾಮದಾಸನಂತೇ ಇದ್ದವನು. ಅವನಿಗೆ ರಾಮ ದಾಸನ ವಿಷಯವೆಲ್ಲ ತಿಳಿದಿತ್ತು. ಸೇಕರ ಮತ್ತು ಆನಂ-ದನು ಈ ರೀತಿಯಾಗಿ ವಿಮರ್ಷಿಸುತ್ತಿರುವುದನ್ನು ನೋಡಿ ಅವನಿಗೇನೋ ಆಶ್ಚರ್ಯವಾದಂತಾಯಿತು. ವಿಮರ್ಶೆಯ ಕಾರಣವನ್ನೆಲ್ಲಾ ಕೇಳಿಕೊಳ್ಳಬೇಕೆಂದಾಯ್ತು; ಆದರೆ ಆನಂದನು ಈತನ ಗುಟ್ಟನ್ನು ಅರಿತಿದ್ದರಿಂದ ನಿಜವಾದ ಕಾರಣವನ್ನು ಹೇಳದೆ, ಹೇಗೊ ಅವನ ಬಾಯಿಂದ ರಾಮ ದಾಸನ ವಿಷಯ ಮತ್ತು ವಾಸಸ್ಥಳಗಳನ್ನು ಹೊರಡಿ ಸಿದ. ಇದೇ ನಮ್ಮ ಸೇಕರ ಮತ್ತು ಆನಂದನಿಗೆ ಬೇಕಾ ದದ್ದು. ಇಷ್ಟು ಕೇಳುತ್ತಲೇ ಅವರು ಅಲ್ಲಿಂದೆದ್ದರು. ಸ್ವಲ್ಪ ದೂರ ಹೋಗಿ ಸಮೀಪದಲ್ಲಿ ಯಾರೂ ಇಲ್ಲದ ಇನ್ನೊಂದು ಬಂಡೆಯ ಮೇಲೆ ಕುಳಿತು ಮಾತುಕಥೆಗೆ ಮೊದಲಾದರು.

ಆನಂದ:-"ಸೇಕರ, ನೀನು ಮುಂಬಯಿಗೆ ಬಂದು ಎಷ್ಟು ದಿನಗಳಾದವು?"

ಸೇ:-"ಸುಮಾರು ಒಂದು ತಿಂಗಳಾಯಿತು. ನಿನ್ನ ಪತ್ರ ಓದಿದ ಕೂಡಲೆ ನನಗೆ ಊರೇ ಬಿಡಬೇಕಾಯಿತು.

ದಿನ ಒಂದಕ್ಕೆ ಸುಮಾರು ನೂರು, ನೂರೈವತ್ತು ರೂಪಾಯಿ ವ್ಯಾಪಾರವಾಗುವ ನನ್ನ ಭಂಡಸಾಲೆಗೆ ಅಳಿಯನನ್ನು ನೇಮಿಸಿ ಇಲ್ಲಿಗೆ ಬಂದಿರುವೆನು. ರಾಮದಾಸನನ್ನು ಒಮ್ಮೆ ಕಣ್ಣಾರೆ ಕಂಡು ಹೋಗಬೇಕೆಂದು ಬಂದೆನು; ಆದರೆ ಅವನ ಪತ್ತೆ ಹಚ್ಚುವದಕ್ಕೆ ಒಂದು ತಿಂಗಳು ಕಳೆದರೂ ಚಿಂತೆಯಿಲ್ಲ; ಇಂದು ನಿನ್ನ ಮಿತ್ರನು ಅವನ ವಾಸಸ್ಥಳ ವನ್ನು ತೋರಿಸಿಕೊಟ್ಟದ್ದರಿಂದ, ಇಂದೇ ಅಲ್ಲಿಗೆ ಹೋಗಿ ಬರಬಹುದು. ರಾಮದಾಸನಂತಿರುವ ಪ್ರಾಣಿಗಳು ಇಲ್ಲಿ ಎಷ್ಟು ಮಂದಿ ಇದ್ದಾರೆಂಬದನ್ನು ಹೇಳತೀರದು.'' ಎನ್ನು ವಷ್ಟರಲ್ಲಿ ಮೊದಲಿನಬಂಡೆಯಲ್ಲಿ ಕುಳಿತುಕೊಂಡಿದ್ದವನು- ರಾಮದಾಸನ ವಿಚಾರ ಹೇಳಿದವನು-ಇವರ ಹಿಂದಿನಿಂದ ಮೆಲ್ಲನೆ ಬರುತ್ತಿದ್ದುದನ್ನು ಕಂಡು ಸೇಠನು ಸುಮ್ಮನಾ ದನು. ಆನಂದನು ಫಕ್ಕನೆ ಬೆಚ್ಚಿಬಿದ್ದನು.

ಆ:—''ಏನು ಶಿವರಾಯಾ, ಅಲ್ಲಿ ಚೆನ್ನಾಗಿ ಗಾಳಿ ಬೀಸುವದಿಲ್ಲವೇನು?"

ಶಿವರಾಯ:-''ಅಲ್ಲ, ಅಲ್ಲ. ನಾನು ರಾಮದಾಸನ ವಿಚಾರ ಹೇಳುತ್ತಲೇ ನೀವಿಬ್ಬರೂ ಚಿಂತಾಗ್ರಸ್ತರಾಗಿ ಫಕ್ಕನೆ ಅಲ್ಲಿಂದ ಎದ್ದು ಇಲ್ಲಿಗೆ ಬಂದು ಏನನ್ನೋ ವಿಮ ರ್ಶಿಸುತ್ತಿರುವಂತೆ' ಕಂಡಿತು. ಅವರಿಗೆ ನೀವೇನಾದರೂ ಸಂಬಂಧಿಕರೋ?''

ಸೇ:-''ಇಲ್ಲ; ನಾನು ಇಲ್ಲಿಯವನೇ ಆಗಿರುತ್ತೇನೆ"

ಶಿವ:-''ಆತನ ಬಗ್ಗೆ ನಿಮಗೆ ಆಸಕ್ತಿಯೇಕೆ?"

ಆ:-ರಾಮದಾಸನನ್ನು ಕಾಣಬೇಕೆಂದು ಸುಮಾರು ಒಂದು ತಿಂಗಳಿನಿಂದ ಪ್ರಯತ್ನ ಪಡುತ್ತಲಿದ್ದೇವೆ.

ಶಿವ:-ಹೌದೋ? ಹಾಗಾದರೆ ಆಗಲೇ ನನ್ನಲ್ಲಿ ಯಾಕೆ ವಿಚಾರಿಸಲಿಲ್ಲ? ಅವನೂ ನಾನೂ ಮೊದಲು ಒಂದೇ ಮನೆಯಲ್ಲಿ ವಾಸವಾಗಿದ್ದೆವು. ಕೊನೆಗೆ ನಾನು ಅಲ್ಲಿ ಬಿಟ್ಟು ಈಗ ಬೇರೆ ಕಡೆಯಲ್ಲಿರುತ್ತೇನೆ.

ಆ:-ರಾಮದಾಸನು ಖರ್ಚಿಗೆ ಏನು ಮಾಡುವನು?

ಶಿವ:—ಖರ್ಚಿಗೇನು ಕಡಿಮೆ? ಅವನ ತಾಯಿಯಿಂದ ತಿಂಗಳೊಂದಕ್ಕೆ ಸರಾಸರಿ ನೂರು ರೂಪಾಯಿ ಬರುತ್ತವೆ. ಅಂದಮೇಲೆ ಆತನ ಖರ್ಚಿಗೇನು ಕೇಡು?

ಸೇ:-ಸರಿ, ಸರಿ. ಊರಿಂದ ಬರುವ ಹಣದ ಅಹಂಕಾರದಿಂದಾಗಿ ಇಲ್ಲಿ ಈ ರೀತಿಯ ಜೀವನವನ್ನು ಕೈಕೊಂಡುದುದು; ಇಲ್ಲವಾದರೆ ಇದುವರೆಗೆ ಸಮುದ್ರದಲ್ಲಿ ಬಿದ್ದು ಪ್ರಾಣತ್ಯಾಗ ಮಾಡಿಬಿಡುತ್ತಿದ್ದನೋ ಏನೋ? ಇವೆಲ್ಲವಕ್ಕೂ ಅವನ ತಾಯಿಯೇ ಮೂಲ ಕಾರಣಳು.

ಶಿವ:-ಅದೇನು? ತಾಯಿಯು ಅವನಿಗೆ ಆ ಕೆಲಸಕ್ಕೆ ಪ್ರೋತ್ಸಾಹನೆ ಕೊಡುತ್ತಿದ್ದಾಳೆಯೇ?

ಸೇ:-ಹೌದು. (ಇವನು ಮುಂದೆ ತಾನು ತಮ್ಮನಲ್ಲವೆಂದು ನಟಿಸಿ) ಮೊದ ಮೊದಲು ಅವನ ತಮ್ಮನೂ ಹಣ ಕಳುಹಿಸುತ್ತಿದ್ದ; ಆದರೆ ರಾಮದಾಸನು ವ್ಯರ್ಥವಾಗಿ ಈ ರೀತಿಯಲ್ಲಿ ವ್ಯಯ ಮಾಡುತ್ತಿರುವದನ್ನು ತಿಳಿದು ಆತ ಅಪ್ಪರಲ್ಲಿಯೇ ನಿಲ್ಲಿಸಿಬಿಟ್ಟ.

ಆ:- ಅವನು ಊಟಕ್ಕೆ ಏನು ಮಾಡುತ್ತಿದ್ದಾನೆ?

ಶಿವ:- ಊಟವನ್ನು ಹೋಟಲಲ್ಲಿ ಮುಗಿಸಿ ವಿಶ್ರಾಂತಿಗಾಗಿ ಅಂತಸ್ತನ್ನು ಸೇರುತ್ತಾನೆ. ಸುಖ ಸಂಸಾರದೊಂದಿಗೆ ಮೆರೆಯುತ್ತಿದ್ದಾನೆ.

(ನನ್ನ ಅವಸ್ಥೆಯೂ ಹೀಗಿರುವಾಗ್ಗೆ ನಾನು ಬೇರೆಯವರ ಗುಟ್ಟನ್ನು ಯಾಕೆ ಹೇಳಬೇಕು?) ಎಂದು ತನ್ನಷ್ಟಕ್ಕೆ ತಾನು ಅಂದುಕೊಂಡು ಸುಮ್ಮನಾದನು. ಅಷ್ಟರಲ್ಲಿ ಹೊತ್ತು ಮುಳುಗಿತು. ಶಿವರಾಯನು ಎದ್ದು ಹೊರಟು ಹೋದನು. ಸೇಕರನು ರಾಮದಾಸನ ತಮ್ಮನೆಂಬುದು ಶಿವರಾಯನಿಗೆ ಹೊಳೆಯಲಿಲ್ಲ. ಶಿವರಾಯನು ಹೋದ ಬಳಿಕ ಆನಂದ-ಸೇಕರರು ಸುಮಾರು ಒಂದು ತಾಸಿನವರೆಗೆ ಅಲ್ಲಿಯೇ ಕುಳಿತು, ರಾಮದಾಸನ ವಿಷಯವಾಗಿ ವಿಮರ್ಶಿಸತೊಡಗಿದರು.

ಸೇ:- ಈಗಲಾದರೂ ರಾಮದಾಸನ ವಿಷಯ ತಿಳಿಯಲಿ ನನ್ನ ತಾಯಿಗೆ. ನಾನೆಷ್ಟು ಹೇಳಿದರೂ ಅವಳು ನಂಬುತ್ತಿರಲಿಲ್ಲ. ಈ ತರದ ಜೀವನವನ್ನು ನಡೆಯಿಸುತ್ತಿರುವನೆಂದು ನಮ್ಮ ಬಂಧು--ಬಳಗದವರು ತಿಳಿದರೆ ನಮ್ಮನ್ನು ಬಹಿಷ್ಕರಿಸದಿರಲಾರರು. ತಾಯಿಯ ಕಿವಿಗೆ ತನ್ನ ಪ್ರಿಯ ಪುತ್ರನ ಸಮಾಚಾರ ಬಿದ್ದರೆ ಆಕೆ ಆತ್ಮಹತ್ಯೆ ಮಾಡಿಕೊಳ್ಳಲಿಕ್ಕೂ ಹಿಂಜರಿಯಲಾರಳು. ಈ ವಿಷಯವನ್ನು ನಾನು ಹೇಗೆ ಗುಪ್ತವಾಗಿರಿಸಲಿ? ಪುತ್ರವಾತ್ಸಲ್ಯದಿಂದ ಕೊರಗಿ ಹೋದಂತಹ ತಾಯಮ್ಮನವರು ಇದನ್ನು

ಕೇಳಿದರೆ ಆ ಕ್ಷಣವೇ ಪ್ರಾಣ ಬಿಟ್ಟಾರು. ತಿಳಿಸದೇ ಇರ ಬಹುದೆಂದರೆ ರಾಮದಾಸನು ಮತ್ತೆ ಪತ್ರ ಬರೆದರೆ ಇನ್ನೂ ಹಣ ಕಳುಹಿಸುವರು. ಆದ್ದರಿಂದ ಮಿತ್ರಾ, ನಾನಿಲ್ಲಿಂದಲೇ ಊರ ಕಡೆಗೆ ತಿರುಗುತ್ತೇನೆ. ಆ ಮೂರ್ಖನ ಮೋರೆ ಕಂಡರೆ ನನಗೆ ಎಲ್ಲಿಯೂ ಒಂದು ತೊಟ್ಟು ನೀರು ಸಹ ಸಿಕ್ಕಲಾರದು.

ಆ:-ಛೆ! ಛೆ! ಇದೆಂತಹ ಮಾತು? ರಾಮದಾಸ ನನ್ನು ಕಾಣುವದನ್ನು ಬಿಟ್ಟು ಬಿಡುವದೇ?

ಸೇ:-ಹಾಗೆ ಮಾಡುವದು ಬಹಳ ಒಳ್ಳೇದೆಂದು ನನಗೆ ತೋರುತ್ತದೆ. ಅವನ ಮೋರೆಯನ್ನು ಹೇಗೆ ಕಾಣಲಿ? ಮೂರ್ಖನಾದ ಇವನು ಬಿ. ಎ. ಕಲಿತು ಉಚ್ಚ ಜ್ಞಾನ ಸಂಪಾದಿಸಿದ ಫಲವೇನು? ಇವನನ್ನು ಕಾಣುವದಕ್ಕಿಂತ ನನ್ನ ಮೋರೆಯನ್ನು ಆತನಿಗೆ ತೋರಿಸದಿರುವದೇ ಹಿತ.

ಆ:-ಅದೆಂದೂ ಆಗದು. ರಾಮದಾಸನನ್ನು ಕಾಣ ಬೇಕೆಂದು ಹೆಚ್ಚಾಗಿ ಹಣ ಖರ್ಚು ಮಾಡಿ ಬಂದು, ಸುಮಾರು ಒಂದು ತಿಂಗಳು ಇಲ್ಲಿ ನಿಂತು, ಹುಡುಕಿ, ಈಗ ಕಾಣದೇ ಹೋಗುವುದೆಂದರೆ ನಿಜವಾಗಿಯೂ ಅನ್ಯಾ ಯವು. ಅವನನ್ನು ಕಾಣಲು ನಿನಗೆ ಅಸಹ್ಯವಾಗುತ್ತಿರುವ ದಾದರೆ ಒಂದು ಉಪಾಯವನ್ನು ಹೂಡಬೇಕು.

ಸೇ:-ಅದೇನು ಉಪಾಯ?

ಆ:-ಅವನಲ್ಲಿಗೆ ಹೋಗುವಾಗ ವೇಷ ಪಲ್ಲಟಮಾಡಿ ಕೊಂಡು ಹೋಗಬೇಕು.

ಸೇ:—ಆಗಬಹುದು; ಅಂದರೆ ಅವನ ಗುರುತು ನನಗೆ ಆಗಬಹುದಲ್ಲದೆ ನನ್ನ ಗುರುತು ಅವನಿಗೇನೂ ಆಗಲಿಕ್ಕಿಲ್ಲ. ಅವನು ಊರು ಬಿಟ್ಟು ಸುಮಾರು ನಾಲ್ಕು ವರುಷಗಳಾದುವು. ನನ್ನ ಮೈಕಟ್ಟು ಮತ್ತು ಸ್ವರೂಪ ಮೊದಲಿಗಿಂತ ಬಹಳವಾಗಿ ಮಾರ್ಪಾಟು ಹೊಂದಿವೆ. ಅದರ ಮೇಲೆ ನಾನು ಇಲ್ಲಿಯ ಉಡುಪುಗಳನ್ನು ಧರಿಸಿದರೆ, ಅವನಿಗೆ ನನ್ನ ಪತ್ತೆ ಸಿಗಲಾರದು.

ಆ:-ಸರಿ-ಸರಿ. ನಾವು ಈಗಲೆ ಅಲ್ಲಿಗೆ ಹೋಗೋಣ.

ಸೇ:-ಸರಿ. ಹಾಗೆಯೇ ಮಾಡೋಣ.

ಆ:-ಉಪಾಯಕ್ಕೆ ಹೆಚ್ಚೇನೂ ಚಿಂತಿಸಬೇಕಾಗಿಲ್ಲ. ನನ್ನ ಪರಿಚಯ ರಾಮದಾಸನಿಗೆ ಆದರೂ ಅಲ್ಲಿರುವ ಇತರರಿಗೆ ಆಗಲಾರದು. ಆದ್ದರಿಂದ ನೀವು ನಿಮ್ಮ ಊರಿನ ಪಂಚಕಚ್ಚೆಯನ್ನು ಬಿಟ್ಟು ಇಲ್ಲಿಯ ವೇಷಕ್ಕೆ ಸರಿಯಾಗಿ ಪೇಂಟ್, ಕೋಟ್, ಹೇಟ್ ಮತ್ತು ಬೂಟ್ಸ್‌ಗಳನ್ನು ಧರಿಸಿಕೊಂಡಿರಬೇಕು. ಇವನ್ನೆಲ್ಲಾ ನಾನು ಒದಗಿಸುತ್ತೇನೆ. ನೀವು ಮೊದಲೇ ಸೌಂದರ್ಯಯುತರು. ಇನ್ನು ಐರೋಪ್ಯದ ಉಡುಪುಗಳನ್ನು ಧರಿಸಿದಾಗ ಅತ್ಯಂತ ಸುಂದರರಾಗುವಿರಿ. ನಿಮ್ಮ ಸೌಂದರ್ಯಕ್ಕೆ ಮರುಳಾಗಿ ಆ ಸ್ತ್ರೀಯರು ಅನೇಕ ಉಪಾಯಗಳನ್ನು ಹೂಡಬಹುದು. ನಿಮ್ಮನ್ನು ಸೆರೆ ಹಿಡಿಯಲು ಅನೇಕ ಬಗೆಯ ಉಪಚಾರಗಳು ನಡೆಯುಬಹುದು. ಸರಸ ಸಲ್ಲಾಪಗಳು ಮೆಲ್ಲನೆ ಹೊರಡಬಹುದು; ಆದರೆ ಸೇಕರ, ಒಂದು ಮಾತನ್ನು

ಹೇಳುತ್ತೇನೆ ಕೇಳು-ಅವರಿಂದ ಯಾವ ಉಪಚಾರ ಬಂದರೂ, ಯಾವ ಬಗೆಯ ಮಾತು ಬಂದರೂ ಸಹಿಸಿ, ಅವರ ಉಪಚಾರಗಳನ್ನು ಲಕ್ಷಿಸದೆ ಬಂದ ಉದ್ದೇಶ ಪೂರ್ತಿಗೊಳಿಸಿ ಹೊರಟುಬರಬೇಕು.

ಸೇ:-ಸರಿ. ಹಾಗೆಯೇ ಮಾಡೋಣ; ಆದರೆ ಅವನಿರುವ ಸ್ಥಳವನ್ನು ಶಿವರಾಯನು ಹೇಳಿದಂತೆ ಹುಡುಕಿ ತೆಗೆಯಲು ಈ ರಾತ್ರಿ ಸಾಧ್ಯವಾದೀತೇ? ಅಥವಾ ಇಡೀ ರಾತ್ರಿಬೀದಿ ಬೀದಿಗಳಲ್ಲೇ ಅಲೆದಾಡಿ, ಬರಬೇಕಾದೀತೇ?

ಆ:-ಛೇ! ಛೇ! ಹಾಗೇಕೆ? ನಿನ್ನನ್ನು ನೆಟ್ಟಗೆ ಅವನಿದ್ದಲ್ಲಿಗೇ ಕರೆದೊಯ್ದರೆ ಸರಿಯಲ್ಲವೆ?

ಸೇ:-ಹಾಗೆಂದರೇನು? ನಿಮಗೂ ಅಲ್ಲಿಗೆ ಹೋಗುವ ಅಭ್ಯಾಸ ಉಂಟೇನು? ಯಾರನ್ನು ಕಾಣಲು? ರಾಮದಾಸನನ್ನೇ ಅಥವಾ........

ಆ:-ಥೂ! ನಾನು ಅಂಥಹ ಸ್ಥಳಗಳನ್ನು ಸಂದರ್ಶಿಸುವೆನೆಂದು ಎಣಿಸುವಿರಾ? ಶಿವರಾಯರು ಕೊಟ್ಟ ವಿಳಾಸದ ಸಹಾಯದಿಂದ ಸುಲಭವಾಗಿ ಕಂಡುಹಿಡಿಯಬಹುದು. ಅಲ್ಲದೆ ರಾಮದಾಸನು ಆ ಭವನದ ಮೆಟ್ಟಲುಗಳಲ್ಲಿ ನಿಂತು ಮೇಲೆ ಮೂರನೆಯ ಅಂತಸ್ತಿನ ಕಡೆಗೆ ನೋಡುತ್ತಿರುವದನ್ನು ನಾನೊಮ್ಮೆ ಕಂಡಿರುತ್ತೇನೆ; ಆದರೆ ರಾಮದಾಸನು ಅಲ್ಲಿಯೇ ಕಾಯಂ ಆಗಿದ್ದಾನೆಂಬ ಸಂಗತಿಯು ಮಾತ್ರ ನನಗೆ ಗೊತ್ತಿದ್ದಿಲ್ಲ. ಹೀಗಿರುವಾಗ ಅವನನ್ನು ಹುಡುಕಿ ತೆಗೆಯುವದು ಅಷ್ಟೇನೂ ಕಷ್ಟವಲ್ಲ.

ಸೇ:-ಆ ಭವನವು ಸ್ತ್ರೀಯರ ಕೂಟದ ವಾಸಸ್ಥಳವೆಂದು ನಿನಗೆ ಹೇಗೆ ತಿಳಿಯಿತು?

ಆ:-ಹೇಳಲು ನಾಚಿಕೆಯಾಗುತ್ತದೆ. ಮಿತ್ರಾ ಒಮ್ಮೆ ನಾನು ಆ ದಾರಿ ಹಿಡಿದು ಬರುತ್ತಿರುವಾಗ ರಾಮದಾಸನು ಮೇಲೆ ಹತ್ತುವದನ್ನು ಕಂಡಿದ್ದೆ. ಅವನು ಎಲ್ಲಿಗೆ ಹೋಗುತ್ತಿರುವನೆಂದು ತಿಳಿಯಲು ಅವನನ್ನು ಬೆನ್ನಟ್ಟಿಕೊಂಡು ನಾನೂ ಆ ಅಂತಸ್ತಿನ ಮೇಲೆ ಏರಿದೆನು. ರಾಮದಾಸ ಕೋಣೆಗೆ ಸೇರಿದ. ಯಾವ ಪುಣ್ಯದಿಂದಲೋ ಬಾಗಿಲು ತೆರೆದೇ ಇತ್ತು. ನಾನೂ ಕೂಡಾ ಒಳಗೆ ಹೊಕ್ಕು ಬೇಕು ಬೇಕಂತಲೇ ರಾಮದಾಸನೊಡನೆ ಏನೇನೋ ಸ್ವಲ್ಪ ಮಾತನಾಡಿ ಅಲ್ಲಿಯ ವಿಚಾರವೆಲ್ಲವನ್ನೂ ತಿಳಿದೆ. ಅಷ್ಟರಲ್ಲಿಯೇ ಬಿಸಿ-ಬಿಸಿ ಕಾಫಿ ತಿಂಡಿ ಬಂತು. ನಾನೊಬ್ಬ ಹೊಸ ಗಿರಾಕಿಯೆಂದು ಆ ಭೂತಗಳು ಎಣಿಸಿದ್ದರೇನೋ ತಿಳಿಯದು. ಅದಾವುದನ್ನೂ ಸ್ವೀಕರಿಸದೆ ನಾನು ಅಲ್ಲಿಂದ ಹೊರಗೆ ಬಂದೆ. ರಾಮದಾಸನ ಮುಖವೆಂಬುದು ಬಿಸಿಲಿನ ಬೇಗೆಗೆ ಬೆಂದ ಚಿಗುರೆಲೆಯಂತೆ ಬಾಡಿಹೋಗಿತ್ತು. ಈತನು ತನ್ನ ವಿಚಾರವನ್ನು ಊರಿಗೆ, ತಾಯಿ-ತಮ್ಮನಿಗೆ ತಿಳಿಸಬಹುದೆಂದು ಆ ದಿನ ರಾಮದಾಸನಿಗೆ ಹೊಳೆದಿರಬಹುದು. ಅದರಿಂದಲೇ ನಾನು ನಿನಗೆ ರಾಮದಾಸನ ವಿಷಯ ಬರೆಯಲು ಕಾರಣನಾದೆ. ತದನಂತರ ರಾಮದಾಸನು ನನ್ನ ದೃಷ್ಟಿಗೆ ಬೀಳಲೇ ಇಲ್ಲ. ನಾನಾದರೂ ಅವನನ್ನು ಹುಡುಕುವ ಯೋಚನೆಗೆ ಹೋಗಲಿಲ್ಲ.

ಸೇ:- ಮಿತ್ರಾ, ಒಳ್ಳೆಯ ಉಪಕಾರ ಮಾಡಿದೆ, ನಿನ್ನ ಉಪಕಾರವನ್ನು ಜನ್ಮ ಜನ್ಮಾಂತರಕ್ಕೂ ಮರೆಯುವಂತಿಲ್ಲ. ನೀನು ಕಾಗದ ಬರೆಯದಿದ್ದರೆ ನಾನು ಆತನಿಗೆ ಮತ್ತೆ ಹಣ ಕಳುಹಿಸುತಿದ್ದೆ; ಆದರೆ ದೇವರ ದಯೆಯಿಂದ ನಾನು ಕಷ್ಟಪಟ್ಟು ಗಳಿಸಿದ ಹಣವು ವ್ಯರ್ಥವಾಗುವದನ್ನು ನಿಲ್ಲಿಸಿದೆ. ತನ್ನ ಪತ್ರದಲ್ಲಿ ತಿನ್ನಲು ಅನ್ನವಿಲ್ಲ. ಹೊಟ್ಟೆಗಿಲ್ಲದೇ ನರಳುತ್ತೇನೆ. ಔಷಧಕ್ಕೆ ಖರ್ಚಾಯ್ತು. ಹೀಗೆ ಅಲ್ಲ ಸಲ್ಲದ ನೆವವನ್ನು ಹೇಳಿ ನನ್ನಿಂದ ಹಣ ಹೀರಿಕೊಂಡ. ನಮ್ಮ ದಯಾಪರರಾದ ತಾಯಮ್ಮನವರು ಪ್ರತಿ ಪತ್ರದಲ್ಲಿ ಕೇಳಿದಷ್ಟು ಹಣವನ್ನು ಕಳುಹಿಸಿ ಇಂದು ಈ ಅಪಮಾನಕ್ಕೆ ಕಾರಣವಾಗಬೇಕಾಯಿತು.

ಆ:- ನಾನು ಪತ್ರಬರೆದ ಮೇಲೆಯೂ ನಿಮ್ಮ ತಾಯಿಯಿಂದ ಹಣ ಬಂದಿರುತ್ತದೆಂಬದನ್ನು ನಾನು ಕೇಳಿರುವೆನು. ಅವರಿಗೆ ನನ್ನ ಮೇಲೆ ವಿಶ್ವಾಸ ಹುಟ್ಟಲಿಲ್ಲವೇ?

ಸೇ:- ಅದನ್ನು ಹೇಳಿ ಫಲವಿಲ್ಲ. ನಮ್ಮೂರ ಹೆಂಗಸರಿಗೆ ಹಣದ ಅಭಾವವಿಲ್ಲ. ಅವರು ಯಾವುದಕ್ಕೂ ಹಿಂಜರಿಯುವವರಲ್ಲ. ಮಗನ ಪತ್ರ ಬಂತೆಂದರೆ ಸರಿ. ಹಣ ಕಳುಹಿಸುವ ಯೋಚನೆಗೆ ಪ್ರಾರಂಭವಾಗುವದು. ಹಣವಿಲ್ಲದಿದ್ದರೆ ಆಭರಣಗಳನ್ನಾದರೂ ಮಾರಿ ಹಣ ಕಳುಹಿಸದಿದ್ದರೆ ಅವರಿಗೆ ನಿದ್ರೆ ಹತ್ತುವದಿಲ್ಲ. ಇದರಿಂದಲೇ ಅವನು ಇಂದು ಪರಸ್ತ್ರೀಯರೊಡನೆ ಸೇರಿಕೊಂಡು ನಮ್ಮ ಕುಟುಂಬಕ್ಕೇ ಕಳಂಕವನ್ನು ತಂದೊಡ್ಡಿರುವನು. ಇಂಥ

ದುರ್ನಡತೆಯಿಂದ ಜೀವನ ಮಾಡುವದಕ್ಕಿಂತ ತಳಸಿಗದ ಗುಂಡಿಗೆ ಹಾರಿ ಪ್ರಾಣತ್ಯಾಗ ಮಾಡುವದೇ ವಿಹಿತ.

ಆ:-—ಮತ್ತೇನು ಮಾಡಲಾಗುತ್ತಿದೆ? ಅವನು ಹೇಗೂ ಊರಿನ ಆಶೆ ಬಿಟ್ಟು ಬಿಟ್ಟದ್ದಾನೆ. ಮತ್ತೆ ನಿಮ ಗೇನು ಆಶೆ? ಆತ ಎಂದಿನಿಂದ ತಾನು ಪರರೊಡನೆ ಸೇರಿ ಪರಸ್ತ್ರೀಯರಲ್ಲಿ ತನ್ನ ಮನಸ್ಸನ್ನು ನೆಟ್ಟಿರುವನೋ ಅಂದಿ ನಿಂದ ನಿಮ್ಮೆಲ್ಲರನ್ನೂ ಮರೆತು ಬಿಟ್ಟಿದ್ದಾನೆ. ಇನ್ನು ನಿಮ್ಮ ಕೆಲಸವೆಂದರೆ ಇಲ್ಲಿಯು ವರೆಗೆ ಬಂದದ್ದಕ್ಕೆ ರಾಮದಾಸ ನನ್ನು ಕಾಣಲೇಬೇಕು. ಅದೊಂದನ್ನು ತೀರಿಸಿದರೆ ನನಗೆ ಮತ್ತೆ ಅವನ ಯೋಚನೆಯೇ ಇಲ್ಲ.

ಸೇ:-ಸರಿ. ಈಗ ಹೋಗೋಣ. ಇಲ್ಲಿಯೇ ಘಂಟೆ ಎಂಟಾಯ್ತು. ಬೇಗನೆ ಊಟ ತೀರಿಸಿ ಹೊರಡಲು ಸಿದ್ಧ ರಾಗುವಾ, ಎಂದು ಹೇಳಿ ಅಲ್ಲಿಂದ ಮನೆಗೆ ಹೋದರು.

---

## ಪರಿಚ್ಛೇದ ೯

ಸೇಕರಾದಿಗಳು ರಾತ್ರಿಯ ಊಟ ತೀರಿಸಿ ಉಡುಪು ಗಳನ್ನು ಧರಿಸಿ ಹೊರಟರು. ಸೇಕರನನ್ನು ಕಂಡರೆ ಗುರ್ತ ಸಿಗಲಾರದು. ಇಬ್ಬರೂ ಕೈಯಲ್ಲಿ ಒಂದೊಂದು ಬೆತ್ತ ವನ್ನು ಹಿಡಕೊಂಡಿದ್ದರು. ರಾಜರಸ್ತೆಯನ್ನು ದಾಟಿ ಒಂದು ಚಿಕ್ಕ ಬೀದಿಯನ್ನು ಹಿಡಿದರು. ಸುಮಾರು ಅರ್ಧ ಮೈಲು ಮುಂದುವರಿಸಿದ ಮೇಲೆ ಇನ್ನೊಂದು ಬೀದಿಗೆ ಕಾಲಿ

ಟ್ಟರು. ಸೇಕರನಿಗೆ ಬೇಜಾರ ಹಿಡಿಯಿತು. ಅಲ್ಲಿಗೆ ಹೋಗು
ವದೇ ಬೇಡವೆಂದು ತೋರಿತು; ಆದರೆ ಆನಂದನು ಸರಾಗ
ವಾಗಿ ಮುಂದುವರಿಯುತ್ತ ಇದ್ದನು. ಇವರಿಬ್ಬರ ವೇಷ
ಭೂಷಣಗಳಿಂದ ಇವರು ಐರೋಪ್ಯರಂತೆ ಕಾಣುತ್ತಿದ್ದರು.
ಅವರಲ್ಲಿ ಸೇಕರನೇ ಯೋಗ್ಯನೂ ಸುಂದರನೂ ಆಗಿದ್ದನು.
ಮಡಿಯ ಕೋಟು, ಪೇಂಟು, ಕಪ್ಪು ವರ್ಣದ ಬೂಟ್ಸು
ಗಳು, ಶುಭ್ರವಾದ ಕಾಲರಿನ ಎಡೆಯಿಂದ ಹೊರಬಿದ್ದ
ಅಂದಚಂದವಾದ ಟ್ಯಾ, ಬೆಳದಿಂಗಳಲ್ಲಿ ಚೆನ್ನಾಗಿ ಪ್ರಕಾಶಿ
ಸುತ್ತಿರುವ ಚೆತ್ತ, ಉದ್ದವಾದ ಶರೀರದ ಮೇಲುಗಡೆ
ಚಂದ್ರನಂತೆ ಸುಂದರವಾದ ಮುಖಮಂಡಲ, ಯೌವನದ
ಉಬ್ಬಿದ ಕೆನ್ನೆಗಳು, ಕಮಲದಂತೆ ಕಣ್ಣುಗಳು, ವಿಶಾಲ
ವಾದ ಹಣೆ ಇವೆಲ್ಲವನ್ನೂ ನೋಡಿದರೆ ರಾಮದಾಸನಿಗೆ
ಪರಿಚಯವಾಗದಿಷ್ಟೇ ಅಲ್ಲ, ಈ ಊರಲ್ಲಿದ್ದರೆ ಅವನ
ತಾಯಮ್ಮನವರಿಗೂ ಪರಿಚಯವಾಗದು. ಅಂತಹ ವಿಶೇಷ
ರೂಪ ಧರಿಸಿಕೊಂಡು ಇಬ್ಬರೂ ಒಂದೇ ಪ್ರಕಾರವಾಗಿ
ಮುಂದುವರಿಯುತ್ತಿದ್ದರು. ಸ್ವಲ್ಪ ದೂರದಲ್ಲಿ ಮೂರಂತ
ಸ್ತಿನ ಭವನವೊಂದು ಕಂಡಿತು. ವಿದ್ಯುತ್ ದೀಪಗಳಿಂದ
ಭವನವೆಲ್ಲ ಥಳಥಳಿಸುತ್ತಿತ್ತು. ಆನಂದನು ನೆಟ್ಟಗೆ ಆ ಭವ
ನದ ಬುಡಕ್ಕೆಹೋದನು. ಮಾಳಿಗೆಗೆ ಹೋಗುವ ಮೆಟ್ಟಿಲು
ಗಳನ್ನು ಏರಿದ. ಸೇಕರನ ಮನಸ್ಸು ಹಿಂದೆ ಎಳೆಯಿತು.
ಅವನು ಮೊದಲು ಮೆಟ್ಟಿಲಲ್ಲಿಯೇ ನಿಂತು ಹಿಂದೆ ನೋ-
ಡಿದ. ಮೇಲೆ ನೋಡಿದ. ಮೇಲೇರಲು ಮನಸ್ಸು ಒಡಂ

ಬಡಲಿಲ್ಲ. ಆನಂದನು ಸುಮಾರು ಹತ್ತು ಮೆಟ್ಟಿಲುಗಳನ್ನು ಏರುವವರೆಗೂ ಸೇಕರನು ಅಲ್ಲಿಯೇ ಇದ್ದ. ಅಷ್ಟರಲ್ಲಿ ಆನಂದನು ಫಕ್ಕನೇ ಹಿಂದೆ ನೋಡಲು ಸೇಕರನು ಕೆಳಗೆ ನಿಂತು ಮೇಲೆ ನೋಡುತ್ತಿದ್ದದ್ದನ್ನು ಕಂಡು ಮೇಲೆ ಕರೆದ. ದಾಕ್ಷಿಣ್ಯದಿಂದ ಹೇಗೋ ಮೇಲೇರಿದ. ಮೂರನೇ ಅಂತಸ್ತಿನಲ್ಲಿ ಬಹು ರಮ್ಯವಾಗಿ ಹಾರ್ಮೋನಿಯಂ ಕೇಳು ತ್ತಿತ್ತು. ಹಾಸ್ಯ ವಿನೋದಗಳು ಬಹಳವಾಗಿದ್ದವು. ನೆಲ ವೆಲ್ಲಾ ಕುಣಿಯುವ ರಭಸದಿಂದ ಅಲುಗಾಡುತ್ತಿತ್ತು. ಇದನ್ನೆಲ್ಲ ನೋಡಿ ಸೇಕರನ ಮನಸ್ಸು ಕಳವಳಗೊಂಡಿತು. ತಾನು ಏದೇಕೀ ದುಷ್ಟ ಸ್ಥಳಕ್ಕೆ ಬಂದು ಬಿಟ್ಟೆ? ಎಂದು ಪಶ್ಚಾತಾಪಪಟ್ಟ; ಆದರೆ ಆನಂದನ ಒತ್ತಾಯದಿಂದ ಮೇಲೇರಲೇ ಬೇಕಾಯ್ತು. ಒಳಗಡೆ ಒಡ್ಡೋಲಗ ನಡೆ ಯುತ್ತಾ ಇತ್ತು. ಇವರು ಬಾಗಿಲ ಬಳಿಗೆ ಬಂದು ಮುಟ್ಟಿ ದರು. ಬಾಗಿಲ ಹೊರಗಡೆ ಒಂದು ವಿದ್ಯುದ್ದೀಪವು ಉರಿ ಯುತ್ತಿತ್ತು. ಅದರ ಕೆಳಗೆ ಒಂದು ಬೋರ್ಡು ಮಿನುಗು ತ್ತಿತ್ತು. ಆನಂದನ ದೃಷ್ಟಿಯು ಆ ಕಡೆಗೆ ತಿರುಗಲೇ ಇಲ್ಲ; ಆದರೆ ಸೇಕರನು ಅಲ್ಲಿಗೆ ಸೇರುತ್ತಲೇ ಬೋರ್ಡಿನ ಕಡೆಗೆ ಆತನ ದೃಷ್ಟಿ ನಟ್ಟಿತು. ಒಂದೆರಡುಸಲ ಓದಿದ. ಅರ್ಥ ವಾಗಲಿಲ್ಲ. ಅದರಲ್ಲಿ ಸ್ವಿಮ್ಮಿಂಗ್ ಬಾತ್ ರೂಮ್ ಎಂದು ಬರೆದಿತ್ತು. ಅದರ ಕೆಳಗೆ ಪಾರ್ಟನರ್ಸ್:-ಪಾರ್ವತಿ ಎಂಡ್ ಚಂದ್ರಾವತಿ ಎಂದಿತ್ತು. ಸೇಕರನಿಗೆ ಮೊದಲಿನ ಪಂಗ್ತಿಯು ಅರ್ಥವಾಗಲಿಲ್ಲ. ಕೊನೆಗೆ ಆನಂದನೊಡನೆ ವಿಚಾರಿಸಿದ.

ಆನಂದನು ಆದನ್ನು ನೋಡಿ ಆಶ್ಚರ್ಯಗೊಂಡು ನಾನು ಇಲ್ಲಿಗೆ ಎರಡುಸಲ ಬಂದೆನಾದರೂ ಈ ಬೋರ್ಡಿನ ಕಡೆಗೆ ನನ್ನ ದೃಷ್ಟಿ ಹೋಗಿದ್ದಿಲ್ಲವಲ್ಲ! ಎಂದನು. ಅವನೂ ಚೆನ್ನಾಗಿ ಓದಿ ಅರ್ಥ ತಿಳಿದುಕೊಂಡನು. ಅರ್ಥವನ್ನು ಸೇಕರನಿಗೂ ಸವಿಸ್ತರವಾಗಿ ಹೇಳಿದನು. ಇವರು ಸಂಭಾಷಣೆ ಮಾಡುತ್ತಿರುವಾಗಲೂ ಒಳಗಿರುವವರಿಗೆ ಎಚ್ಚರವಾಗಲಿಲ್ಲ. ಅವರ ಗದ್ದಲದಲ್ಲಿ ಇವರ ಅಲ್ಪ ಮಾತಿನ ಶಬ್ದ ಅವರಿಗೆ ಕೇಳಿಸಲೇ ಇಲ್ಲ. ಆನಂದನು ಬಾಗಿಲನ್ನು ತಟ್ಟಿ ಬಾಗಿಲು ತೆರೆಯಿರಿ; ಎಂದು ಗಟ್ಟಿಯಾಗಿ ಕೂಗಿದ. ಅದೂ ಅವರಿಗೆ ಕೇಳಿಸಲಿಲ್ಲ. ಅವರೆಲ್ಲರೂ ಆನಂದಸಾಗರದಲ್ಲಿ ಮುಳುಗಿದ್ದರು. ಪುನಃ ಗಟ್ಟಿಯಾಗಿ ಬಾಗಿಲು ಬಡೆದು ಮೊದಲಿನಂತೆಯೇ ಕೂಗಿದ. ಶಬ್ದವೆಲ್ಲವೂ ನಿಶ್ಶಬ್ದವಾಯ್ತು. ಚಂದ್ರಾವತಿ ಮತ್ತು ಪಾರ್ವತಿಯರಿಗೆ ಗಾಬರಿಯಾಯ್ತು. ರಾಮದಾಸನ ಹೃದಯದಲ್ಲಿ ಗಡಗಡ ಎಂದು ಜೋರಾಗಿ ಬಡಿಯಲಾರಂಭಿಸಿತು. ಪಾರ್ವತಿಯು ಬಾಗಿಲ ಬಳಿಗೆ ಬಂದು ಯಾರವರು? ಎಂದು ಕೇಳಿದಳು. ಯಾರಾದರೇನು? ನಾನು. ಬಾಗಿಲು ತೆರೆಯುವದು ನಿನ್ನ ಕೆಲಸ.

ಪಾರ್ವತಿ:-ನಾನಂದರೆ ಯಾರು? ಸುರೇಂದ್ರರೊ?

ಆ:-ಅಬ್ಬಬ್ಬ! ದೇವರೇ! ಆ ಜಬ್ಬು ಮುದುಕನು ಕೂಡಾ ಇಲ್ಲಿ ನಿಮ್ಮನ್ನು ಸಂದರ್ಶಿಸಲು ಬರುತ್ತಾನೆಯೇ? ಹಾ! ದೇವ! ಹಣವಿದ್ದರೆ ಮುದುಕನನ್ನಲ್ಲ ಅವನಿಗಿಂತಲೂ ಮಿಗಿಲಾದ ವೃದ್ಧರನ್ನಿವರು ಮೋಸಗೊಳಿಸುವರು.

ಪಾ:-ಮತ್ತಾರು ಹಾಗಾದರೆ? ಜಗದೀಶರೇನು?

ಆ:-ಯಾರು? ಜಗದೀಶನು ಇಲ್ಲಿಗೆ ಬರುತ್ತಾನೆಯೆ? ಶಿವ! ಶಿವ! ಮತ್ತೇನು ಉಳಿಯಿತು? ಸಗ್ಗದ ಮನೆಯು ಆ ಸಾಹುಕಾರನೂ ನಿಮ್ಮನ್ನು ಕಾಣಲು ಬರುತ್ತಾನೆಂದರೆ ನನಗೆ ಅದೊಂದು ಆಶ್ಚರ್ಯವೇ ಸರಿ!

ಪಾರ್ವತಿ ಇದನ್ನೆಲ್ಲ ಕೇಳಿ ಹೆದರಿಕೆಯಿಂದ ಹಿಂದೆ ಸರಿದು, ಚಂದ್ರಾವತಿಗೆ ತಿಳಿಸಿದಳು. ಚಂದ್ರಾವತಿಯೂ, ಪಾರ್ವತಿಯೂ ಇಬ್ಬರೂ ಬಾಗಿಲ ಬಳಿಯಿಂದ ಒಳಗೆ ಬಂದು ನಿಂತು, ಮುಂದೇನು ಮಾಡುವದೆಂಬದನ್ನು ತಿಳಿಯದಾದರು. ರಾಮದಾಸನ ಅರಳಿದ ಮುಖವು ಸೂರ್ಯಾಸ್ತದ ಕಮಲದಂತೆ ಬಾಡಿಹೋಗಿತ್ತು. ಮೈ ಯೆಲ್ಲಾ ನಡುಗುತ್ತಿತ್ತು. ಕುರ್ಚಿಯ ಮೇಲಿಂದ ಎದ್ದು ಅತ್ತಿತ್ತ ಓಡಾಡುತ್ತಿದ್ದನು. ಚಂದ್ರಾವತಿಯು ಧೈರ್ಯ ಗೊಂಡು ಹೆಸರನ್ನು ತಿಳಿಸಿದ್ದರೆ ಬಹಳ ಉಪಕಾರ ವಾಗುತ್ತಿತ್ತು, ಎಂದಳು.

ಆ:-ಇಲ್ಲಿಗೆ ಬಂದದ್ದು ಸಾಲದೇ? ಇನ್ನು ಹೆಸರು ಬೇರೆ ಹೇಳಬೇಕೇ?

ಚ:-ಹೇಳಿದರೇನು ಕೇಡು ಸ್ವಾಮೀ?

ಸೇ:-ಹೇಳದಿದ್ದರೇನು ಕೇಡು?

ಆ:—ಒಮ್ಮೆ ಬಾಗಿಲು ತೆರೆದರೆ ಬರೀ ಹೆಸರಲ್ಲ, ಇಡೀ ದೇಹವೇ ಕಾಣುವದಿಲ್ಲವೇ?

ಪಾ:—ಅದೆಂದೂ ಸಾಧ್ಯವಿಲ್ಲ.

ಸೇ:—ಸಾಧ್ಯವಿದೆಯೋ ಇಲ್ಲವೋ ಎಂಬದನ್ನು ನಾನು ನೋಡುತ್ತೇನೆ. ನೀನು ಬಾಗಿಲು ತೆರೆಯದಿದ್ದರೆ ನಾನು ತೆಗೆಯಿಸುತ್ತೇನೆ. ಯಾರ್ಯಾರನ್ನೋ ಮೋಸಗೊಳಿಸಿ ಒಳಹಾಕಿ, ಅವರಿಂದ ಹಣ ಸುಲಿದು ಸೊಕ್ಕಿಹೋಗಿದ್ದೀರಲ್ಲವೇ? ಸುಮ್ಮನೆ ಬಾಗಿಲು ತೆರೆಯದಿದ್ದರೆ ನಿನ್ನನ್ನು.... ಎನ್ನುವಷ್ಟರಲ್ಲಿ ಆನಂದನು ಸೇಕರನ ಬಾಯಿಗೆ ಕೈ ಹಿಡಿದು ಮುಮ್ಮಾತನ್ನು ತಡೆದು ಸಮಾಧಾನಪಡಿಸಿದನು. ಸೇಕರನ ತಲೆಗೆ ವಿಷವೇರಿತು. ಕೋಪವನ್ನು ತಡೆಯಲಾಗಲಿಲ್ಲ. ಆದ್ದರಿಂದ ಅಂತಹ ಕಠಿಣ ಮಾತನ್ನು ಆಡಲು ತೊಡಗಿದನು. ಪಾರ್ವತಿಯ ತಲೆಗೆ ಸಿಡಿಲು ಬಡಿದಂತಾಯ್ತು. ಹೆದರಿಕೆಯಿಂದ ಚಂದ್ರಾವತಿಯನ್ನು ಅಪ್ಪಿಕೊಂಡು ಹಿಂದೆ ಎಳೆದಳು. ಅಷ್ಟರಲ್ಲಿ ತಡೆಯಲಾರದ ಕೋಪದಿಂದ ಸೇಕರನು:-ಬಾಗಿಲು ತೆರೆಯಲು ಆಗುವದಿಲ್ಲವೆ? ಎಂದನು.

ಚಂ:—ಇಲ್ಲಿಗೆ ಬಂದ ಉದ್ದೇಶವನ್ನು ಹೇಳದ ವಿನಃ ಬಾಗಿಲು ತೆಗೆಯುವದು ನಮ್ಮ ಕರ್ತವ್ಯವಲ್ಲ.

ಸೇ:—ಉದ್ದೇಶವೇ? ಹೆಂಡತಿ ಮಕ್ಕಳನ್ನೂ, ತಾಯಿ-ತಮ್ಮನನ್ನೂ ಬಿಟ್ಟು; ಕಿಸೆಯಲ್ಲಿ ಹಣ ತುಂಬಿಕೊಂಡು ಯಾವ ದೊಡ್ಡ ದೊಡ್ಡ ಸಾಹುಕಾರರು ಸಹಾ ಇಲ್ಲಿಗೆ ಬರುವರೋ ಅದೇ ನಮ್ಮ ಉದ್ದೇಶ.

ಪಾ:—ಹಾಗಾದರೆ ನಮ್ಮನ್ನು ಕಠಿಣವಾದ ಮಾತುಗಳಿಂದ ಹೆದರಿಸಿದುದೇಕೆ?

ಸೇ:—ಬಾಗಿಲು ತೆರೆಯದಿದ್ದರೆ ಮತ್ತೇನು ಮಾಡ

ಬೇಕು? ಹಾಗಾದರೆ ಈಗಲಾದರೂ ಬಾಗಿಲು ತೆರೆಯ ಬಹುದೇ?

ಚಂದ್ರಾವತಿ ಪಾರ್ವತಿಯರಿಗೆ ಬಾಗಿಲು ತೆರೆಯಲು ಧೈರ್ಯ ಸಾಕಾಗಲಿಲ್ಲ. ಆ ಮಧ್ಯರಾತ್ರಿಯ ಸಮಯದಲ್ಲಿ ಇಂಥ ಕಠಿಣ ಮಾತನ್ನು ಆಡುವಂತಹ ಗಿರಾಕಿಗಳನ್ನಾಗಲೀ ಆಪ್ತ ಮಿತ್ರರನ್ನಾಗಲೀ ಒಳಗಡೆ ರಾಮದಾಸನಿದ್ದ ಕಾರಣ ಒಳಗೆ ಪ್ರವೇಶಿಸಗೊಡುವದು ಅವರಿಗೆ ಸರಿತೋರಲಿಲ್ಲ. ಆದ್ದರಿಂದ ಅವರಿಬ್ಬರೂ ಒಂದುಗೂಡಿ ಗುಣಗುಟ್ಟುತ್ತಾ ಮಾತನಾಡುತ್ತಿದ್ದರು. ಸೇಕರನಿಗೆ ನಿಂತು ನಿಂತು ಸಾಕಾಗಿ ಹೋಗಿತ್ತು. ಈ ಹೆಂಗಸರ ಮಾತುಗಳನ್ನು ಕೇಳಿಯಂತೂ ಕೋಪ ತಲೆಗೇರಿತ್ತು. ಪುನಃ ಮಾತನಾಡಲುಪಕ್ರಮಿಸಿದನು.

ಸೇ:—ಎಲೇ ಪಾಪಿಗಳೇ, ಬಾಗಿಲು ತೆಗೆಯಿರಿ.

ಆನಂದನು ಸೇಕರನಿಗೆ ಅದೆಷ್ಟೋ ಸಮಾಧಾನ ಹೇಳಿ ಸುಮ್ಮನಿರಿಸುತ್ತಿದ್ದನು. ತಾವು ಬಂದ ಉದ್ದೇಶವನ್ನು ಪೂರೈಸುವ ಬಗೆ ಹೇಗೆಂದು ಆನಂದನು ಚಿಂತಿಸುತ್ತಿದ್ದನು.

ಆ:—ಎಲೇ, ಬಾಗಿಲು ತೆರೆ. ನನ್ನ ಮಿತ್ರನು ಇಲ್ಲಿ ಒಳಗಡೆ ಇರುವನು. ಅವನೊಂದಿಗೆ ಸ್ವಲ್ಪ ಕೆಲಸವಿದೆ. ನಾವೇನೂ ಇಲ್ಲಿ ನಿಲ್ಲತಕ್ಕವರಲ್ಲ. ಐದೇ ನಿಮಿಷಗಳಲ್ಲಿ ಇಲ್ಲಿಂದ ಹೊರಡುತ್ತೇವೆ.

ರಾಮದಾಸನ ಜೀವ ಹಾರಿದಂತಾಯ್ತು. ನನ್ನನ್ನು

ಈ ಮಧ್ಯರಾತ್ರಿಕಾಲದಲ್ಲಿ ಹುಡುಕಿ ಬಂದವರು ಯಾರಾ ಗಿರಬಹುದು? ನನ್ನಿಂದ ಅವರಿಗೆ ಸಲ್ಲತಕ್ಕ ವಿಷಯು ವಾವುದು? ಎಂದೆಲ್ಲಾ ಯೋಚಿಸಹತ್ತಿದನು. ಹೊರಗಿನ ವನು ಹಾಗೆಂದ ಕೂಡಲೆ ಅವನು ಇಲ್ಲಿಲ್ಲವೆಂದು ತಿಳಿಸಿರಿ, ಎಂದು ಆಜ್ಞಾಪಿಸಿದನು. ಅದರಂತೆಯೇ ಚಂದ್ರಾವತಿಯು ಬಾಗಿಲ ಬಳಿ ಬಂದು-ರಾಮದಾಸನು ಇಲ್ಲಿ ಇಲ್ಲ, ಎಂದಳು. ರಾಮದಾಸನು ಒಳಗಡೆ ಖಂಡಿತವಾಗಿಯೂ ಇರುತ್ತಾ ನೆಂದು ಆನಂದನಿಗೂ ಸೇಕರನಿಗೂ ತಿಳಿದಿತ್ತು. ಇಲ್ಲ ಎಂಬ ಉತ್ತರ ಬಂದ ಕೂಡಲೆ ಸೇಕರನು ಕೆಂಪೇರಿದನು.

ಸೇ:—ಇಲ್ಲವೆಂದರೇನು? ರಾಮದಾಸನು ಒಳಗಡೆ ಇದ್ದೂ ಇಲ್ಲವೆನ್ನುತ್ತೀಯಾ! ಅಪಸ್ಮಾರಿ! ನಿನ್ನ ಜಾಣತನ ಇಲ್ಲಿ ಬೇಡ. ನನ್ನೊಡನೆ ನಿನ್ನ ಬೇಳೆ ಬೇಯಲಿಕ್ಕಿಲ್ಲ. ಸುಮ್ಮನೆ ಬಾಗಿಲು ತೆರೆ; ಇಲ್ಲವಾದರೆ ಈಗಲೆ ಈ ಬಾಗಿ ಲನ್ನು....ಎನ್ನುವಷ್ಟರಲ್ಲಿ ಕಂಠ ಬಿಗಿದು ಮಾತೇ ಹೊರಡ ಲಿಲ್ಲ. ಆನಂದನು ಸೇಕರನಿಗೆ ಎಷ್ಟು ಸಮಾಧಾನ ಹೇಳಿ ದರೂ ಕೇಳಲಿಲ್ಲ. ಈ ಎಲ್ಲಾ ಸಿಟ್ಟಿನ ಮಾತುಗಳನ್ನು ರಾಮದಾಸನೂ ಕೇಳಿದನು. ಅವನು ಭಯದಿಂದ ನಡುಗು ತ್ತಿದ್ದನು. ಪಾರ್ವತಿ-ಚಂದ್ರಾವತಿಯರಿಗೆ ಏನು ಮಾಡ ಬೇಕೆಂಬುದು ತಿಳಿಯಲಿಲ್ಲ. ಮೂವರೂ ಕೂಡಿ ಬಾಗಿಲ ಬಳಿಗೆ ಬಂದು ನಿಂತುಕೊಂಡರು. ಮಾತನಾಡಲು ಯಾ ರಿಗೂ ಧೈರ್ಯ ಸಾಲಲಿಲ್ಲ. ಹೊರಗಿರುವ ಮಹಾಶಯರು ಬಹಳ ಐಶ್ವರ್ಯವಂತರಾಗಿರಬಹುದು. ಕಿಸೆಯಲ್ಲಿ ತುಂಬಾ

ಹಣ ತಂದಿರಬಹುದು. ನಮ್ಮನ್ನು ಕಾಣಬೇಕೆಂಬ ಆಶೆ ಯಿಂದ ಎಷ್ಟೋ ದೂರದಿಂದ ಬಂದಿರಬಹುದು; ಆದರೆ ನಾವು ಅವರನ್ನು ಯೋಗ್ಯವಾದ ರೀತಿಯಲ್ಲಿ ಉಪಚರಿಸ ದಿದ್ದರೆ, ಅವರು ನಿರಾಶರಾಗಿ ಹಿಂತೆರಳಿದರೆ ನಮ್ಮ ಲಾಭವೇ ಹಾಳಾಗಿ ಹೋಗುವದು, ಎಂದೆಲ್ಲಾ ವಿಷಯಗಳು ಪಾರ್ವ ತಿಯ ಮನಸ್ಸಿನಲ್ಲಿ ಕೊರೆಯುತ್ತಿದ್ದವು; ಆದರೆ ಕೂಡಲೆ ಬಾಗಿಲು ತೆರೆಯಲು ಮಾತ್ರ ಹೆದರಿಕೆಯೂ ಆಗುತ್ತಿತ್ತು. ಆದರೂ ಆಶೆಯ ಮನಸ್ಸು ಅವಳನ್ನು ನಿಲ್ಲಗೊಡದೆ, ಅವರ ಧನ ಪರೀಕ್ಷೆಯನ್ನು ತಿಳಿಯೋಣವೆಂದು ಭಾವಿಸಿ ಪ್ರಶ್ನಿಸ ತೊಡಗಿದಳು.

ಪಾ:- ಪ್ರಿಯರೇ, ಬಾಗಿಲು ತೆರೆಯಲು ಅಡ್ಡಿಯಿಲ್ಲ; ಆದರೆ ನಿಮ್ಮೊಂದಿಗೆ ರೊಕ್ಕಪ್ಪ (ಹಣ) ಬಂದಿರುವನೇ?

ಸೇ:—ಕುಲಗೇಡೀ, ಏನಂದಿ? ಹಣದ ವಿಚಾರ ನಿನಗೇಕೆ? ಬಾಗಿಲು ತೆರೆ. ಹಣದ ವಿಚಾರ ಆ ಮೇಲೆ.

ಪಾರ್ವತಿಗೆ ಹೆದರಿಕೆಯೂ ಆಗುತ್ತಿತ್ತು; ಇನ್ನೊಂ ದೆಡೆ ಆಶೆಯೂ ಆಗುತ್ತಿತ್ತು. ಉಭಯ ಸಂಕಟಗಳಲ್ಲಿ ಸಿಕ್ಕಿಬಿದ್ದಳು. ಸೇಕರನೂ ಆನಂದನೂ ಹೊರಗಿನಿಂದ ಏನೋ ಗುಣುಗುಟ್ಟುತ್ತ ಮಾತನಾಡುತ್ತಿದ್ದರು. ಇವ ರೇನು ಗುಣುಗುಟ್ಟುತ್ತಿರುವರೆಂದು ತಿಳಿಯಲು ಪಾರ್ವ ತಿಯು ಬಾಗಿಲ ಹತ್ತಿರ ಬಂದು ಕಿವಿಗೊಟ್ಟು ಕೇಳುತ್ತಿ ದ್ದಳು; ಆದರೆ ಒಂದೂ ಅರ್ಥವಾಗುತ್ತಿರಲಿಲ್ಲ. ಅಷ್ಟ ರಲ್ಲಿಯೇ ಥಟ್ ಎಂಬ ಶಬ್ದದಿಂದ ಬಾಗಿಲ ಅಗಳಿಯು

ಮೊಳೆಯು ಹಾರಿ ಬಾಗಿಲು ರಭಸದಿಂದ ತೆರೆಯಿತು. ಸೇಕರನು ಕೋಪದಿಂದ ಬಾಗಿಲು ನೂಕಿದ್ದರಿಂದ ಕೀಲು ಹಾರಿತು. ಬಾಗಿಲ ಬಳಿಯಲ್ಲಿ ನಿಂತು ಕಿವಿಗೊಡುತ್ತಲಿದ್ದ ಪಾರ್ವತಿಗೆ ರಭಸವಿಂದ ತೆರೆದ ಕದ ಬಡಿದು ಅವಳನ್ನು ನೆಲಕ್ಕೆ ಕೆಡವಿತು. ಚಂದ್ರಾವತಿ ರಾಮದಾಸರು ಹಿಂದೆ ಓಡಿ ಮೂರ್ಛಿತರಾಗಿ ಮಂಚದ ಮೇಲೆ ಬಿದ್ದುಕೊಂಡರು. ಸೇಕರನೂ ಆನಂದನೂ ಒಳಹೊಕ್ಕು ಇವರ ಸ್ಥಿತಿಯನ್ನು ಕಂಡು ಬೇಸತ್ತರು. ಮೂವರೂ ಎಚ್ಚರದಲ್ಲಿರಲಿಲ್ಲ. ಬಾಗಿಲು ತಾಗಿ ಬಿದ್ದು ಬಿಟ್ಟ ಪಾರ್ವತಿಗೆ ಸ್ವಲ್ಪ ಪೆಟ್ಟೂ ಆಗಿರಬೇಕೆಂದು ತಿಳಿದರು. ಸೇಕರನು ಮೇಜಿನ ಬಳಿಗೆ ಸರಿದು ರಾಮದಾಸನ ಕೋಟನ್ನು ಪರೀಕ್ಷಿಸಿದನು. ಕಿಸೆಯಲ್ಲಿ ಬರೇ ಹತ್ತು ರೂಪಾಯಿಯ ಒಂದೇ ಒಂದು ನೋಟು ಮಾತ್ರವಿತ್ತು. ಅದನ್ನು ಅಲ್ಲಿಯೇ ಬಿಟ್ಟು, ಕೋಣೆಯ ಸೌಂದರ್ಯವನ್ನು ನೋಡಲು ತೊಡಗಿದರು. ಬಗೆಬಗೆಯ ಚಿತ್ರಗಳು ಮನುಷ್ಯನಷ್ಟು ಎತ್ತರವಾದ ಕನ್ನಡಿಗಳು ಹಲವು ತರದ ವೇಷಗಳಲ್ಲಿ ನರ್ತನ ಮಾಡುತ್ತಿರುವ ಸ್ತ್ರೀಯರ ಭಾವಚಿತ್ರಗಳು ಇವನ್ನೆಲ್ಲಾ ಕಂಡರೆ, ಯಾರು ತಾನೇ ಅಲ್ಲಿ ವಾಸಿಸಲು ಆಶಿಸಲಿಕ್ಕಿಲ್ಲ!

---

## ಪರಿಚ್ಛೇದ ೧೦

ಸೇಕರನೂ ಆನಂದನೂ ಅಲ್ಲಿಯೇ ಕುರ್ಚಿಯ ಮೇಲೆ ಕುಳಿತು ಒಬ್ಬರನ್ನೊಬ್ಬರು ಟಕಮಕವಾಗಿ ನೋಡು

ತ್ತಿದ್ದರು. ರಾಮದಾಸ ಮತ್ತು ಆ ಸ್ತ್ರೀಯರ ಅವಸ್ಥೆಯನ್ನು ನೋಡಿ ಆನಂದನು ಬಹಳ ಬೇಸತ್ತನು; ಆದರೆ ಸೇಕರನು ಹಸನ್ಮುಖಿಯಾಗಿದ್ದನು. ಸುಮಾರು ಹತ್ತು ನಿಮಿಷಗಳ ತರುವಾಯ ಚಂದ್ರಾವತಿಗೂ ರಾಮದಾಸನಿಗೂ ಎಚ್ಚರವಾಯ್ತು. ಚಂದ್ರಾವತಿಯು ನಾಚಿಕೊಂಡು ಒಳಕೋಣೆ ಸೇರಿದಳು. ರಾಮನಾಸನು ಬಾಡಿದ ಹೂವಿನಂತೆ ತಲೆ ಕೆಳಗೆ ಮಾಡಿ ಓರೆಗಣ್ಣಿನಿಂದ ಆನಂದನನ್ನೂ, ಸೇಕರನನ್ನೂ ನೋಡುತ್ತಿದ್ದನು. ರಾಮದಾಸನು ನಿದ್ರೆಯಿಂದ ಎಚ್ಚತ್ತವನಂತೆ ಮೊದಲಿನ ಸಂಗತಿಗಳನ್ನೆಲ್ಲ ಮರೆತುಬಿಟ್ಟಿದ್ದನು. ಅಷ್ಟರಲ್ಲಿ ಪಾರ್ವತಿಗೂ ಎಚ್ಚರವಾಯ್ತು. ಬಾಗಿಲು ತೆರೆದಿದ್ದನ್ನು ಕಂಡು ಆಶ್ಚರ್ಯಗೊಂಡಳು. ಚಂದ್ರಾವತಿಯನ್ನು ಕೂಗಿದಳು. ಈ ಮೊದಲಿನ ಅನರ್ಥಗಳನ್ನೆಲ್ಲಾ ಮರೆತುಬಿಟ್ಟವಳಂತೆ ನಟಿಸಿ, ಕುರ್ಚಿಯಲ್ಲಿ ಯಾರೋ ಮಹಾಪುರುಷರು ಸಂದರ್ಶನಕ್ಕಾಗಿ ಬಂದಿರುವದನ್ನು ಕಂಡು. ತಟ್ಟನೆ ಎದ್ದು ಬಾಗಿಲು ಕೀಲು ಹಾಕಿ ಒಳ ಕೋಣೆಯನ್ನು ಸೇರಿದಳು. ರಾಮದಾಸನೊಬ್ಬನೇ ಅಲ್ಲಿ ಉಳಿದನು. ಆನಂದನು ಮೆಲ್ಲನೆ ರಾಮದಾಸನನ್ನು ಮಾತಾಡಿಸತೊಡಗಿದನು. ಮಾತನಾಡಲು ರಾಮದಾಸನಿಗೆ ಬಾಯಿ ಬರಲೇ ಇಲ್ಲ. ಆನಂದನೊಂದಿಗಿರುವ ವ್ಯಕ್ತಿಯು ಯಾರಾಗಿರಬಹುದೆಂಬ ವಿಷಯವು ಅವನನ್ನು ತಡೆಯಿತು. ಪಾರ್ವತಿ ಮತ್ತು ಚಂದ್ರಾವತಿಯರಿಗೆ ಮೊದಲಿನ ಅನರ್ಥಗಳು ಮರೆತಿದ್ದವೋ ಏನೋ? ನಿತ್ಯದ

ಕ್ರಮದಂತೆ ಬಿಸಿ ಬಿಸಿ ಕಾಫಿ ಮತ್ತು ಬಗೆಬಗೆಯ ತಿಂಡಿ ತಿನಸುಗಳನ್ನು ಮೇಜಿನ ಮೇಲೆ ತಂದಿರಿಸಿದರು. ಸೇಕರ ನೊಬ್ಬನು ಕೋಣೆಯ ಸುತ್ತು ಮುತ್ತಲಲ್ಲಿರುವ ವಿಚಿತ್ರಾ ಕಾರದ ಚಿತ್ರಪಟಗಳನ್ನು ನೋಡಿ, ಬೊಂಬಾಯಿನಗರದ ಸ್ವರ್ಗವೆಂದರೆ ಇದೇ ಏನು? ಎಂದು ಆನಂದನೊಡನೆ ಪ್ರಶ್ನಿಸಿದ.

ಆ:—ಹೌದು; ಇಲ್ಲಿಯ ಸ್ವರ್ಗವೆಂದರೆ ಇದೇ ಸರಿ. ಮಡದಿ ಮಕ್ಕಳನ್ನೂ, ಮನೆ-ಮಠಗಳನ್ನೂ ಬಿಟ್ಟು ಪತ್ತೆ ಯಿಲ್ಲದೆ ಇರುವವರು ಇಲ್ಲಿಯೇ ಇರುತ್ತಾರೆ.

ಸೇ:—ಸರಿ, ಸರಿ. ಹಾಗಾದ್ದರಿಂದಲೇ ನಮ್ಮೂರಿನ ಕೆಲವು ಮೂರ್ಖರು ಇಂತಹ ಶಾಂತಿವಿಲಾಸಗಳಲ್ಲಿ ಹೊರ ಳಾಡುತ್ತಿರುವರು ಈ ಪ್ರಾಣಿಯಂತೆ, ಎಂದು ಆನಂದ ನಿಗೆ ಕಣ್ಸನ್ನೆ ಮಾಡಿ ರಾಮದಾಸನ ಕಡೆಗೆ ತನ್ನ ದೃಷ್ಟಿ ತಿರುಗಿಸಿದನು. ಪಾರ್ವತಿಯೊಬ್ಬಳು ಅನೇಕಾನೇಕ ಬಣ್ಣದ ಹೂಗಳಿಂದ ರಚಿತವಾದ ಹೂಮಾಲೆಯನ್ನು ಕೈಯಲ್ಲಿ ಹಿಡಿದು ನಗುನಗುತ್ತಾ ಮೇಜಿನ ಬಳಿಗೆ ಬಂದಳು. ಇದನ್ನು ಯಾರ ಕೊರಳಿಗೆ ಹಾಕಲಿ? ಎಂದು ವಿಮರ್ಶಿಸ ತೊಡಗಿದಳು. ಆನಂದನಿಗಿಂತ ಸೇಕರನೇ ಸೊಬಗಿನಲ್ಲಿ ಹೆಚ್ಚಿನವನು. ಅವಳ ದೃಷ್ಟಿಯೂ ಅವನಲ್ಲಿಯೇ ನಟ್ಟಿತ್ತು. ರಾಮದಾಸನೂ ಆನಂದನೂ ಮಾತು-ಕತೆಯಲ್ಲಿ ನಿರತರಾಗಿ ದ್ದರು. ಸೇಕರನು ಅವರನ್ನೇ ನೋಡುತ್ತ ಮೊಲದಂತೆ ಕಿವಿ ನೆಟ್ಟಗೆ ಮಾಡಿ ಎಲ್ಲವನ್ನೂ ಕೇಳುವದರಲ್ಲಿ ಮಗ್ನ

ನಾಗಿದ್ದನು. ಪಾರ್ವತಿಯು ಸೇಕರನ ಕುರ್ಚಿಯ ಹಿಂ-
ಭಾಗದಲ್ಲಿ ಬಂದದ್ದು ಆತನಿಗೆ ಗೋಚರವಾಗಲೇ ಇಲ್ಲ.
ಪಾರ್ವತಿಯು ಪೂಮಾಲೆ ಹಿಡಿದು ಹಿಂದಿನಿಂದ ತಟ್ಟನೆ
ಮುಂದೆ ಬಂದು ಸೇಕರನ ಕೊರಳಿಗೆ ಹಾಕಿ, ಆಲಿಂಗನೆ
ಮಾಡಲು ಅವನ ಕೈಯನ್ನು ಹಿಡಿಯುವಷ್ಟರಲ್ಲಿ ಸೇಕರನ
ಜೀವವು ಹಾರಿದಂತಾಯಿತು. ಬಲಗೈಯಲ್ಲಿದ್ದ ಬೆತ್ತ
ದಿಂದ ಪಾರ್ವತಿಯ ಕೈಮೇಲೆ ಬಲವಾದ ಪೆಟ್ಟನ್ನು
ಕೊಟ್ಟು, ಎದ್ದು ನಿಂತು, ಪೂಮಾಲೆಯನ್ನು ಕಿತ್ತು ತುಂಡು
ತುಂಡು ಮಾಡಿ ಅವಳ ಮುಖಕ್ಕೆ ಎಸೆದನು. ಸೇಕರನು
ಹೊಡೆದ ಪೆಟ್ಟಿಗೆ ಪಾರ್ವತಿಯ ಬಲಗೈಯಲ್ಲಿದ್ದ ಬಣ್ಣ-
ಬಣ್ಣದ ಸುಮಾರು ಹದಿನೆಂಟು ಗಾಜಿನ ಬಳೆಗಳು ಟ್ರೈಂ,
ಟ್ರೈಂ, ಎಂದು ಹುಡಿಹುಡಿಯಾಗಿ ಕೆಳಗೆ ಬಿದ್ದುವು. ಆಗ
ಕೋಪವು ಇಬ್ಬರಿಗೂ ತಲೆಗೇರಿತ್ತು; ಆದರೆ ಅದನ್ನೊಂ
ದನ್ನೂ ಲಕ್ಷಿಸದೆ ಪಾರ್ವತಿ ಕೈ ತಿಕ್ಕಿಕೊಂಡು ದೂರ ಸರಿ
ದಳು. ಚಂದ್ರಾವತಿಯು ಇದನ್ನೆಲ್ಲ ನೋಡಿ ನಿಂತಲ್ಲಿಯೇ
ಮರದಂತಾಗಿದ್ದಳು. ರಾಮುದಾಸ ಮತ್ತು ಆನಂದರಿಗೆ
ಇದು ತಿಳಿಯಲೇ ಇಲ್ಲ. ಮಾತಿನ ಮಧ್ಯದಲ್ಲಿ ರಾಮ
ದಾಸನು ಕಾಫಿ ಕುಡಿಯಲು ಆಶೆಪಟ್ಟನು. ಆನಂದನೂ
ಸೇಕರನೂ ಸುಮ್ಮನೆ ಕುಳಿತಿದ್ದರು; ಆದರೆ ರಾಮದಾಸನ
ಒತ್ತಾಯದಿಂದ ಆನಂದನು ಒಂದು ತುಂಡು ಮಿಠಾಯಿ
ಯನ್ನೂ ಕಾಫಿಯನ್ನೂ ಕುಡಿದನು. ತಾವೇಕೆ ಕುಡಿಯದೆ
ಸುಮ್ಮನೆ ಕುಳಿತಿರುವಿರಿ ಸ್ವಾಮಿ? ಕಾಫಿ ಚಪ್ಪೆಯಾಗು

ತ್ತಿದೆಯಲ್ಲವೆ? ಎಂದಳು ಚಂದ್ರಾವತಿ. ಸೇಕರನು ಅಷ್ಟು ಕೇಳಿದರೂ ಕಾಫಿಯನ್ನೂ ತಿಂಡಿ-ತಿನಸುಗಳನ್ನೂ ಎದುರಿನಿಂದ ದೂರ ಸರಿಸಿದನು. ಆ ರಭಸಕ್ಕೆ ಕಾಫಿಯ ಅರ್ಧಾಂಶವು ಮಗುಚಿ ಹೋಗಿತ್ತು. ಸೇಕರನಿಗೆ ಕೋಪ ಬಂದದ್ದಕ್ಕೂ ಪಾರ್ವತಿಯ ವರ್ತನೆಗೂ ಕಟ್ಟು ಬಿದ್ದು ಇಷ್ಟೆಲ್ಲ ಅನರ್ಥಗಳು ನಡೆದವು. ಆದರೂ ಸಹಿಸಿಕೊಂಡು ಇಬ್ಬರೂ ತಟಸ್ಥರಾಗಿದ್ದರು. ಆನಂದನು ಮೊದಲೊಮ್ಮೆ ಅದೇ ಸ್ಥಳಕ್ಕೆ ರಾಮದಾಸನ ಹಿಂದೆ ಹೋದದ್ದರಿಂದ ಚಂದ್ರಾವತಿಗೂ ಪಾರ್ವತಿಗೂ ಅವನ ಬಗ್ಗೆ ಅಲ್ಪ ಸ್ವಲ್ಪ ಪರಿಚಯವಿತ್ತು. ಅವರೂ ಸರಸವಾಗಿಯೂ ಸಲಿಗೆಯಿಂದಲೂ ಆನಂದನೊಡನೆ ಮಾತುಕತೆಯನ್ನು ನಡೆಯಿಸುತ್ತಿದ್ದರು. ಆನಂದನು ಅವರ ಒಡ್ಡೋಲಗದಲ್ಲಿ ಸೇರಿಕೊಂಡನು. ಸೇಕರನೊಬ್ಬನು ಸುಮ್ಮನೆ ಕುಳಿತುಕೊಂಡು ಅವರ ಆಟ, ಸ್ತ್ರೀಯರ ಮಾತುಕತೆ ಮತ್ತು ವೈಯಾರ, ರಾಮದಾಸನ ಅವಸ್ಥೆ, ಆನಂದನ ಹುಚ್ಚುತನ ಇದನ್ನೆಲ್ಲಾ ನೋಡಿ ಕನಿಕರಪಡುತ್ತಿದ್ದನು. ಬಂಧುವರು ರಾತ್ರಿಯನ್ನು ಅಲ್ಲಿಯೇ ಕಳೆಯಬಹುದೆಂಬ ಆಶೆಯಿಂದ ಕೂಡಿದವರಾಗಿ ಒಯ್ಯಾರದಿಂದಲೂ ಪ್ರೀತಿ, ಪ್ರೇಮಗಳನ್ನು ಹುಟ್ಟಿಸುವಂತಹ ಹಾಸ್ಯ ವಿನೋದಗಳಿಂದಲೂ ಮಾತನಾಡಿ ಉದ್ದುದ್ದಾದ ಪ್ರಸ್ತಾಪ ತೆಗೆದು ಸಮಯ ಕಳೆಯಲು ಪ್ರಯತ್ನಿಸುತ್ತಿದ್ದರು. ಇದು ಸೇಕರನಿಗೆ ಸಹಿಸಲಾಗಲಿಲ್ಲ. ಕುರ್ಚಿಯಿಂದ ಎದ್ದು ಬಾಗಿಲ ಬಳಿಗೆ ಹೋದ. ಇವನು ಹೊರ

ಟಿದ್ದು ಯಾರಿಗೂ ತಿಳಿಯಲಿಲ್ಲ; ಆದರೆ ಪಾರ್ವತಿಯು ಬಹಳ ವಿಚಾರದಲ್ಲಿದ್ದಳು. ಈತನನ್ನು ಹೇಗಾದರೂ ಮಾಡಿ ಅಂದು ವರಿಸಬೇಕೆಂದು ಪ್ರಯತ್ನಪಡುತ್ತಿದ್ದಳು. ಪಾಪ! ಆಕೆ ಬೆತ್ತದ ಪೆಟ್ಟನ್ನು ತಿಂದು ಏಳೆಂಟು ಬಳೆಗಳನ್ನು ಕೂಡಾ ಕಳೆದುಕೊಂಡಿದ್ದಳು ಆದರೂ ಮನಸ್ಸು ಬೇಸರಿಯಲೇ ಇಲ್ಲ. ಆತನನ್ನು ವರಿಸಿಯೇ ತೀರಬೇಕೆಂದು ದೃಢಸಂಕಲ್ಪ ಮಾಡಿಕೊಂಡಿದ್ದಳು. ಆದ್ದರಿಂದ ಸೇಕರನ ಕಡೆಗೆ ಹೆಚ್ಚಿನ ಗಮನ ಕೊಟ್ಟು ಕಾದಿದ್ದಳು. ಸೇಕರನು ಕುರ್ಚಿಯಿಂದ ಎದ್ದು ಹೊರಡುತ್ತಲೇ ಪಾರ್ವತಿಯು ನಿರ್ಭಯಳೂ ನಿರ್ಲಜ್ಜಳೂ ಆಗಿ ಸೇಕರನ ಮುಂದೆ ಅಡ್ಡ ನಿಂತು:-ತಾವೆಲ್ಲಿಗೆ ಹೊರಟಿರಿ? ಈಗ ಗಂಟೆ ಹನ್ನೆರಡು ರಾತ್ರಿಯಾಯಿತು. ನಮ್ಮ ಆನಂದರಾಯರು ಸಹ ಹೋಗುವ ಆಲೋಚನೆ ಬಿಟ್ಟು ನಮ್ಮೊಂದಿಗೆ ಸೇರಿ ವಿನೋದಿಸುತ್ತಿದ್ದಾರೆ. ಇತ್ತ ಬನ್ನಿರಿ; ಸ್ವಾಮಿ! ನಿಮ್ಮ ಉಪಚಾರವೆಲ್ಲವನ್ನೂ ನಾನು ಮಾಡುತ್ತೇನೆ. ನಿದ್ರಿಸಲಿಕ್ಕೆ ಸೌಖ್ಯವಿದೆ. ಕೈಕಾಲು ತೊಳೆಯಲು ನೀರು ಬೇಕೇ? ಕುಡಿಯಲು ಕಾಫಿ ಬೇಕೆ? ಎಂದು ಒಯ್ಯಾರದಿಂದ ನುಡಿದು, ಸೆರಗನ್ನು ಬಾಯಿಗೆ ಎಳಕೊಂಡಲು. ದೇವರ ದಯೆಯಿಂದ ಆಗ ಸೇಕರನ ಮನಸ್ಸು ಶಾಂತವಾಗಿತ್ತೆಂದು ವಿಹಿತವಾಯಿತು. ಇಲ್ಲವಾದರೆ ತನ್ನ ಬೆತ್ತದಿಂದ ಒಂದು ಏಟನ್ನು ಆಕೆಯ ತಲೆಗೆ ಕೊಡದೆ ಇರುತ್ತಿದ್ದಿಲ್ಲ. ಸೇಕರನೂ, ಪಾರ್ವತಿಯೂ ಎದುರು ಬದುರಾಗಿ ನಿಂತು ಒಬ್ಬ

ರನ್ನೊಬ್ಬರು ನೋಡುತ್ತಿದ್ದರು. ಸ್ವಲ್ಪ ಸಮಯದಲ್ಲಿಯೇ
ಸೇಕರನು ಮೆತ್ತಗಾದದ್ದನ್ನು ನೋಡಿ-ಇತ್ತ ಬನ್ನಿರಿ
ಸ್ವಾಮಿ, ಎಂದು ಸೇಕರನ ಕೈ ಹಿಡಿದು ಕರೆತರಲು ಕೈ
ಮುಂದಕ್ಕೆ ಕೊಂಡೊಯ್ದಳು. ಸೇಕರನು ಫಕ್ಕನೇ ಬೆತ್ತ
ವನ್ನು ಮೇಲಕ್ಕೆತ್ತಿ-ದೂರ ಸರಿ ಅಪಸ್ಮಾರಿ! ಮುಟ್ಟದಿರು.
ಕುಲಗೆಟ್ಟ ಬೆಲೆವೆಣ್ಣೇ, ಸಿಕ್ಕಸಿಕ್ಕವರನ್ನು ಬಲೆ ಬೀಸಿ ಸೆರೆ
ಯಲ್ಲಿಟ್ಟು, ಅವರ ರಕ್ತವನ್ನು ಹೀರಿ ನಿಮಗೆ ಮದ ಬಂ-
ದಿದೆ. ಬಂದವರನ್ನೆಲ್ಲ ಆಕರ್ಶಿಸಿ ವಶಪಡಿಸಲು ಪ್ರಯತ್ನ
ಪಡುವ ಸ್ವಾರ್ಥಿಗಳು ನೀವು! ಲೋಕಾಪವಾದಕ್ಕೆ ಹೊಣೆ
ಯಾದ ಪಾಪಿಗಳು ನೀವು! ಈ ತರದ ಜೀವನನ್ನು ಮಾಡಿ
ಕೊಂಡಿದ್ದು, ಸಿಕ್ಕ ಸಿಕ್ಕವರನ್ನು ವಂಚಿಸಿ ಸೆರೆ ಹಿಡಿದು
ಅವರ ಹೆಂಡತಿ ಮಕ್ಕಳನ್ನು ದೇಶಾಂತರಗೊಳಿಸುವ
ಬದಲು ಸಮುದ್ರಕ್ಕೆ ಬಿದ್ದು ಪ್ರಾಣತ್ಯಾಗ ಮಾಡುವದು
ಪರಮ ಲಾಭ. ಲೋಕವು ಸುಖ-ಶಾಂತಿಯಿಂದ ಮೆರೆಯು
ವದು. ನಿಮ್ಮ ಈ ದುರ್ನಡತೆಯಿಂದ ಪ್ರಪಂಶವೆಲ್ಲ ಕನಿ
ಕರಪಟ್ಟು ಕಣ್ಣೀರು ಸುರಿಸುತ್ತಿರುವದು; ಎಂದೆಲ್ಲಾ
ಹೇಳುವಷ್ಟರಲ್ಲಿ ಆನಂದನು ಇತ್ತ ಕಿವಿಗೊಟ್ಟನು. ಪಾರ್ವತಿ
ಮತ್ತು ಸೇಕರನು ಗಂಭೀರವಾಗಿ ಮಾತನಾಡುತ್ತಿರುವ
ಯನ್ನು ಕಂಡು ಇತ್ತ ಧಾವಿಸಿದನು. ರಾಮದಾಸನೂ,
ಚಂದ್ರಾವತಿಯೂ ಒಂದೇ ದೃಷ್ಟಿಯಿಂದ ಆಕಡೆಗೆ ನೋಡ
ಹತ್ತಿದರು. ಆನಂದನು ಅಲ್ಲಿಗೆ ಹೋಗುತ್ತಲೇ ಸೇಕರನು
ಆನಂದನ ಕೈಗಳನ್ನು ಹಿಡಿದು ಬಾಗಿಲು ಕೀಲು ತೆಗೆದು

ಹೊರಗೆ ಎಳೆದುಕೊಂಡು ಹೋದನು. ಪಾರ್ವತಿಯು ಸೇಕರನ ಕೋಟನ್ನು ಹಿಡಿದು ಒಮ್ಮೆ ಹಿಂದಕ್ಕೆ ಎಳೆದಳು, ಅವನು ಅದಕ್ಕೆ ಲಕ್ಷ್ಯಗೊಡಲಿಲ್ಲ. ಸೇಕರನು ಕೆಂಪೇರಿವ ಮುಖದಿಂದ ಆನಂದನನ್ನು ನೋಡಿ ಮಾತು-ಕತೆಗೆ ತೊಡಗಿದನು.

ಸೇ:—ಮಿತ್ರಾ ನನ್ನ ಜನ್ಮವನ್ನು ಈ ದುಷ್ಟ ಸ್ಥಳದಲ್ಲಿ ವಿಕ್ರಯಿಸಿದೆ. ನಿನ್ನಂತಹ ಹುಚ್ಚರೊಂದಿಗೆ ಇಂತಹ ನರಕಗಳಿಗೆ ಪ್ರವೇಶಿಸಿದರೆ, ನನ್ನಂತಹ ಬಡ ಪಾಪಿಗಳ ಅವಸ್ಥೆಯು ನೆಟ್ಟಗಾಗುವದು. ಮಿತ್ರಾ. ಏನಿದು? ಇಲ್ಲಿಗೆ ಬಂದನಂತರ ಹಿಂದೆ ಹೋಗುವ ಆಲೋಚನೆಯೇ ಇಲ್ಲವೆ? ಅಥವಾ ಮರಳಿ ಹೋಗಲು ಮನಸ್ಸೇ ಒಡಂಬಡುವದಿಲ್ಲವೆ?

ಆ:—ಸ್ವಲ್ಪ ಮಟ್ಟಿಗೆ ಹಾಗೆಯೇ ಎನ್ನಬಹುದು; ಆದರೆ ಇಂದಿನ ಮಟ್ಟಿಗೆ ಸೇಕರ ತಪ್ಪಾಯಿತು. ಮಾತು-ಕತೆಯಲ್ಲಿ ಮಗ್ನನಾದ್ದರಿಂದ ರಾತ್ರಿಯಾದದ್ದು ತಿಳಿಯಲೇ ಇಲ್ಲ. ಸ್ತ್ರೀಯರೊಡನೆ ಎಷ್ಟು ಮಾತನಾಡಿದರೂ ಮತ್ತೂ ಉಳಿತು ಇನ್ನೂ ಸ್ವಲ್ಪ ಹರಟೆ ಹೊಡೆಯುವ; ಎಂದು ಮನಸ್ಸು ಒತ್ತಾಯ ಪಡಿಸುತ್ತದೆ. ಏನು ಮಾಡಲಿ! ಇನ್ನು ಹೊರಡೋಣ ರಾಮದಾಸನನ್ನು ಚನ್ನಾಗಿ ಕಂಡಾಯ್ತೆ?

ಸೇ:—ಏನು ಕಾಣುವದು? ಕಣ್ಣ ಮುಂದೆ ಇರುವವನನ್ನು ಇನ್ನೂ ಕಂಡಾಯ್ತೇ ಎಂದು ಕೇಳುತ್ತೀಯಲ್ಲ?

ಆ:—ಹಾಗಾದರೆ ಹೋಗೋಣ. ಬಾ ಎಂದ

ಆನಂದ. ಇಬ್ಬರೂ ಹೊರಡಲು ಸಿದ್ಧರಾದರು; ಆದರೆ ಆನಂದನಿಗೆ ಅಲ್ಲಿಂದ ಹೊರ ಬರಲು ಮನಸ್ಸೇ ಒಡಂಬಡ ಲಿಲ್ಲ. ಅವನು ನಿಜವಾಗಿಯೂ ದುರ್ನಡತೆಯುವನಲ್ಲ ದಿದ್ದರೂ, ಆ ಸ್ಥಳದಲ್ಲಿ ಕಾಲಿಟ್ಟಾಗಿನಿಂದ ಮನಸ್ಸು ಸೋತು, ಅಲ್ಲಿಯೇ ಅವರ ಸೌಂದರ್ಯದಲ್ಲಿ ಲೀನವಾ ಗಿತ್ತು; ಆದ್ದರಿಂದಲೇ ಹಿಂದೆ ಹೋಗುವ ಯೋಜನೆ ಅವನ ಮನಸ್ಸಿಗೆ ಹೊಳೆಯಲಿಲ್ಲ; ಆದರೆ ಸೇಕರನ ಮನಸ್ಸು ಪಾಷಾಣದಂತಿತ್ತು; ಆದ್ದರಿಂದಲೇ ಆತನು ಅವರ ಸೆರೆ ಯಾಳಾಗಲಿಲ್ಲ. ಆನಂದನಿಂದ ಹೊರಡಲಾಗಲಿಲ್ಲ. ಸೇಕರ ನನ್ನು ಪುನಃ ಒಳಗೆ ಕರೆತಂದು ಕುಳಿತುಕೊಂಡನು. ಪಾರ್ವತಿಗೆ ಜೀವ ಬಂತು! ಸೇಕರನು ಹೊರಟು ಹೋದ ದ್ದನ್ನು ಕಂಡು ಮಹಾಶಯರು ಹೋಗುತ್ತಾರಲ್ಲ, ಎಂದು ಕಳವಳ ಪಟ್ಟಿದ್ದಳು. ಇವರು ಒಳಬರುತ್ತಲೆ ಆಕೆ ಗಟ್ಟಿ ಯಾಗಿ ಬಾಗಿಲಿಗೆ ಕೀಲನ್ನು ಹಾಕಿಕೊಂಡು ಹಸನ್ಮುಖಿ ಯಾಗಿ ಸೇಕರನ ಒತ್ತಿಗಿರುವ ಕುರ್ಚಿಯ ಮೇಲೆ ಕುಳಿತು ಕೊಂಡು ಅವನನ್ನು ಟಕಮಕವೆಂದು ನೋಡ ತೊಡಗಿ ದಳು. ಸೇಕರನು ಮಿತ್ರನ ಸಲುವಾಗಿ ಹೇಗೋ ಸಹಿಸಿ ಕೊಂಡು ಸುಮ್ಮನೆ ಕುಳಿತ. ಆನಂದನು ರಾಮದಾಸನನ್ನು ಕುರಿತು ಅವನ ವಿಚಾರವನ್ನೆಲ್ಲಾ ಕೇಳತೊಡಗಿದನು.

ಆ:--ತಾವೀಗ ಯಾವ ವಿಳಾಸದಲ್ಲಿದ್ದೀರಿ? ನಿಮ್ಮ ಪತ್ರೆ ಇಲ್ಲದೆ ಸುಮಾರು ಎರಡು ತಿಂಗಳಾಗುತ್ತಾ ಬಂತು. ನಿಮ್ಮನ್ನು ಕಾಣಬೇಕೆಂದು ಸುಮಾರು ಒಂದು ತಿಂಗಳ

ನೆಲ್ಲದಲೂ ಬೊಂಬಾಯಿ ಪಟ್ಟಣವನ್ನೆಲ್ಲ ಸುತ್ತಾಡಿದೆವು. ಇಂತಹ ಹಲ ಕೆಲವು ಉಪ್ಪರಿಗೆಗಳನ್ನು ಸಂದರ್ಶಿಸಿದೆವು; ಆದರೂ ನಿಮ್ಮ ಪತ್ತೆ ಸಿಗಲಿಲ್ಲ.

ರಾ:— ಪತ್ತೆ ಸಿಗುವದಾದರೂ ಹೇಗೆ? ನನ್ನ ಬಾಡಿಗೆಯ ಮಾಳಿಗೆಯನ್ನು ಬಿಟ್ಟು ಇಂದಿಗೆ ಸುಮಾರು ಎರಡು ತಿಂಗಳುಗಳಾಗುತ್ತಾ ಬಂತು. ಒಂದು ಇಡೀ ಮಾಳಿಗೆಯಲ್ಲಿ ನಾನೊಬ್ಬನೇ ಇದ್ದು ಬಾಡಿಗೆಯನ್ನು ವ್ಯರ್ಥವಾಗಿ ಕೊಡುವದು ಉಚಿತವಲ್ಲವೆಂದರಿತು ನಾನು ಆ ಮಾಳಿಗೆ ಬಿಟ್ಟೆ. ಈಗ ಇಲ್ಲಿ ಇರುವೆನು. ಇವರಾರು ನಿಮ್ಮೊಂದಿಗೆ ಇರುವವರು? ನಮ್ಮೂರವರೇ?

ಅ:—ಇವರು ಇಲ್ಲಿಯವರೇ ನನ್ನೊಂದಿಗೆ ಕೆಲಸ ಮಾಡುತ್ತಿರುವವರು; ಆದರೆ ಇವರು ಇದುವರೆಗೆ ಇಂಥ ಸ್ಥಳಗಳಲ್ಲಿ ಕಾಲಿಡದವರಾಗದ್ದರಿಂದ ಬಹಳವಾಗಿ ಕನಿತರ ಪಟ್ಟು, ಇವರಿಂದ ಸ್ವಲ್ಪ ಅನರ್ಥಗಳು ನಡೆದವು. ಅದಿರಲಿ. ನೀವು ಇಲ್ಲಿರುವ ಬದಲು ನಿಮ್ಮೂರಿಗಾದರೂ ಹೋಗಿ ಬರಬಹುದಲ್ಲವೇ? ಮನೆ ಬಿಟ್ಟು ಸುಮಾರು ವರ್ಷಗಳು ಕಳೆದಿರಬಹುದು. ಪುತ್ರವಾತ್ಸಲ್ಯದಿಂದ ನಿಮ್ಮ ತಾಯಿಯು ನಿಮ್ಮನ್ನು ಕಾಣಬೇಕೆಂದು ಆಶಿಸುತ್ತಿರಬಹುದು.

ರಾ:-ಊರಿಗೊ? ಅದೇಕೆ? ಬಿಕ್ಕಬೇಡಿ ತಿನ್ನಲಿಕ್ಕೊ? ಇಲ್ಲಿದ್ದರೆ ಹೇಗೂ ಇವರೊಂದಿಗೆ ಸುಖಜೀವನವಾಗುತ್ತಿದೆ. ಇನ್ನು ಊರಿಗೆ ಹೋದರೆ ನನ್ನ ಆವಸ್ಥೆಯೇ ಹಾಳಾ

ದೀತು.. ನನ್ನಲ್ಲಿ ಯಾರೂ ಮಮತೆ ಪಡುವದಿಲ್ಲ. ತಾಯಿಗೂ ನನ್ನ ಆಶೆಯಿಲ್ಲ. ನನಗೂ ಅವರ ಮೇಲಿನ ಪ್ರೀತಿ ಮುರಿದು ಹೋಗಿದೆ. ನನ್ನ ತಮ್ಮನಿಗಂತೂ ಕರುಣೆಯೇ ಇಲ್ಲ. ಹಣಕ್ಕಾಗಿ ಸಾವಿರ ಪತ್ರ ಬರೆದರೂ ಒಂದು ಚಿಕ್ಕಾಸು ಕೂಡ ಕಳಿಸಲಿಲ್ಲ.

[ತಮ್ಮನೊಡನೆ ಇವನೆಷ್ಟು ರೂಪಾಯಿ ಗಂಟುಕಟ್ಟಿ ಕೊಟ್ಟಿದ್ದನು? ಎಂದು ಸೇಕರ ಮನಸ್ಸಿನಲ್ಲಿಯೇ ಅಂದು.]

ರಾ:—ಭಂಡಸಾಲೆಯಿಂದ ಬರುವ ಲಾಭವನ್ನು ಗಂಟು ಕಟ್ಟಿಡುತ್ತಾನೆಂದು ತೋರುತ್ತದೆ. ಇಡಲಿ. ಈಗಿನ ಕಾಲದಲ್ಲಿ ಅಣ್ಣ ತಮ್ಮಂದಿರಲ್ಲಿ ಪರಸ್ಪರ ಪ್ರೇಮ ವಿಶ್ವಾಸಗಳು ಇಲ್ಲವೇ ಇಲ್ಲ. ಕೈಯಲ್ಲಿ ಕಾಸಿಲ್ಲವೆಂದಾದ ಮೇಲೆ ಊರಿಗೆ ಹೋಗುವ ಬಗೆಯಾದರೂ ಹೇಗೆ?

ಆ:—ಊಟಕ್ಕೇನು ಮಾಡುತ್ತಿರುವಿ?

ರಾ:-ಊಟವನ್ನು ಹೋಟೆಲಲ್ಲಿ ತೀರಿಸಿ ವಿಶ್ರಾಂತಿಗಾಗಿ ಇಲ್ಲಿಗೆ ಬರುತ್ತಿರುವೆನು.

ಆ:—ನಿಮಗೆ ಪಿತ್ರಾರ್ಜಿತವಿರಲಿಲ್ಲವೇ?

ರಾ:—ಪಿತ್ರಾರ್ಜಿತಕ್ಕೇನೂ ಕಡಿಮೆ ಇರಲಿಲ್ಲ. ಭಂಡಸಾಲೆ ಕೂಡಾ ಇತ್ತು; ಆದರೆ ಮಾಡುವದೇನು? ತಿನ್ನುವ ಅದೃಷ್ಟ ನನಗಿಲ್ಲ. ನನ್ನ ತಾಯಿಯು ಮತ್ತು ತಮ್ಮನ ಬುದ್ಧಿವಂತಿಕೆಯಿಂದ ನನಗೆ ಊರು ಬಿಡಬೇಕಾಯ್ತು. ಇದ್ದದ್ದನ್ನೆಲ್ಲ ಹಾಳು ಮಾಡಿದರು. ಈಗ ತಮ್ಮನು ಹೊಸ ಭಂಡಸಾಲೆಯನ್ನು ಕಟ್ಟಿಕೊಂಡು ಹೆಚ್ಚು

ಲಾಭ ಪಡೆಯುತ್ತಿದ್ದಾನೆ. ಕಷ್ಟಕಾಲದಲ್ಲಿ ಅಣ್ಣನಿಗೆ ಸಹಾಯ ಮಾಡದ ತಮ್ಮನು ಎಷ್ಟರವನು? ಕಟ್ಟಿಡಲಿ ಹಣದ ಗಂಟು. ಐಶ್ವರ್ಯವಂತನಾಗಲಿ. ನಾನು ಸತ್ತರೂ ಚಿಂತೆಯಿಲ್ಲ.

[ಈ ಮೊದಲೇ ಸತ್ತಿದ್ದರೆ ನನ್ನ ಸಾವಿರ ರೂಪಾಯಿಗಳಾದರೂ ಉಳಿಯುತ್ತಿದ್ದವು. ತಾಯಿಯ ಆಭರಣಗಳೂ ಉಳಿಯುತ್ತಿದ್ದವು. ಇಂಥವನು ಬದುಕುವದಕ್ಕಿಂತ ಸಾಯುವದೇ ಒಳ್ಳೇದು. ಎಂದು ಸೇಕರನು ಮನಸಿನಲ್ಲೇ ಅಂದುಕೊಂಡು ಹಲ್ಲುಕಡಿಯುತ್ತಿದ್ದನು.]

ಆ:—ಅದಂತೂ ಇರಲಿ, ನೀವು ಬಹಳ ಕ್ಷೀಣವಾಗಿದ್ದೀರಲ್ಲ! ನಿಮ್ಮ ಜೀವಕ್ಕೆ ಸೌಖ್ಯವಿಲ್ಲವೇ?

ರಾ:—ಕೆಲವು ದಿನಗಳಿಂದೀಚೆಗೆ ಹೊಟ್ಟೆಗೆ ಸರಿಯಾಗಿ ಇಲ್ಲದೆ ದೇಹವು ನಿತ್ರಾಣವಾಗಿದೆ. ಈಗ ದಿನ ಒಂದಕ್ಕೆ ಒಂದೇ ಊಟ ಮಾಡುತ್ತಿರುವೆನು. ನಿನ್ನೆಯಿಂದ ಕಾಫಿ ಕುಡಿಯಲಿಕ್ಕೂ ಗತಿಯಿಲ್ಲದಾದೆ. ನನ್ನ ಈ ಶರೀರವೆಂಬುದು ಬರೇ ಅಸ್ಥಿಪಂಜರ. ಕೈಯಲ್ಲಿ ಹಣವಿದ್ದರಲ್ಲವೆ ಹೊಟ್ಟೆಗೆ ತಿನ್ನುವದು?

ಆ:—ನಿಮಗೆ ಪ್ರತಿ ತಿಂಗಳು ಊರಿಂದ ನೂರು ರೂಪಾಯಿಗಳು ಬರುತ್ತಿದ್ದಿಲ್ಲವೇ? ಅವಷ್ಟನ್ನೂ ಖರ್ಚು ಮಾಡುತ್ತಿದ್ದಿರೇನು? ಅಥವಾ ಇವರೊಡನೆ ದಾಸ್ತಾನು ಮಾಡಿರಿಸಿರುವಿರೋ?

ರಾ:—ಎಲ್ಲವನ್ನೂ ಖರ್ಚು ಮಾಡಿದ್ದೇನೆ. ನಿಮಗೆ

ಆ ಪಿಚಾರ ಬೇಡ, ಎಂದು ಸ್ವಲ್ಪ ಕೋಪದಿಂದ ನುಡಿ
ದನು. ನೀವು ಇಲ್ಲಿಗೆ ಬಂದ ಕಾರ್ಯವೇನು? ಇವರಾರು
ನಿಮ್ಮೊಂದಿಗೆ ಬಂದವರು?

ಆ:—ಇಲ್ಲಿಗೆ ಬಂದದ್ದು ನಿಮ್ಮನ್ನು ಕಾಣಬೇಕೆಂದು.
ಇವರು ನಿಮ್ಮ ತ....ತ ...ಎಂದು ಹೇಳುವಷ್ಟರಲ್ಲಿ ಸೇಕ
ರನು ತಡೆಗಟ್ಟಿದನು. ಅಲ್ಲಿಂದ ಅವರಿಬ್ಬರೂ ಹೊರಟರು.
ಬಾಗಿಲ ಬಳಿಗೆ ಬಂದು ಸೇಕರನು ಹಿಂದೆ ನೋಡುತ್ತಿ
ರಲು, ರಾಮದಾಸನು ಜೀವವಿಲ್ಲದವನಂತೆ ಮುಖ
ಬಾಡಿಸಿಕೊಂಡು ಚಿಂತಾ ಸಾಗರದಲ್ಲಿ ರಭಸವಾಗಿ ಬಡಿ
ಯುತ್ತಿರುವ ತೆರೆಗಳ ಮಧ್ಯದಲ್ಲಿ ಸಿಕ್ಕಿ ಪೇಚಾಡು
ತ್ತಿದ್ದನು. ಚಂದ್ರಾವತಿ, ಪಾರ್ವತಿಯರು ಅವರನ್ನು ಬೆನ್ನ
ಟ್ಟಿಕೊಂಡಿದ್ದರು. ಪಾರ್ವತಿಯು ಮನಸ್ಸಿನಲ್ಲಿ ಕಳವಳ
ವಾಗುತ್ತಿತ್ತು. ಆನಂದನು ಮುಂದೆ ಮುಂದೆ ನಡೆಯು
ತ್ತಿದ್ದನು. ಸೇಕರನು ಹಿಂದಿನಿಂದ ಹೋಗುತ್ತಿದ್ದನು.
ಕಾಮಾತುರಳಾದ ಪಾರ್ವತಿಯು ಸೇಕರನ ಮುಂದೆ ಅಡ್ಡ
ಬಂದು ತಾವು ಈಗ ಹೋಗುವದೆಲ್ಲಿಗೆ? ಇಂದು ಹಾಗೆಯೆ
ಹೋಗುವದು ಸರಿಯಲ್ಲ. ಈ ರಾತ್ರಿ ಇಲ್ಲಿಯೇ ಮಲಗಿ,
ನಾಳೆ ಬೆಳಿಗ್ಗೆ ಹೋಗಬಹುದು. ವಿಶ್ರಾಂತಿಗಾಗಿ ಎಲ್ಲವೂ
ಅನುಕೂಲವಿದೆ, ಎಂದಳು.

ಸೇ:—ಎಲ್ಲಿಗೆ ಎಂದರೆ ಮನೆಗೆ! ಅದೆಲ್ಲಾ ಕೇಳು
ವವಳು ನೀನಾರು? ನಿನ್ನ ಇಚ್ಛೆಯನ್ನು ಸುಡು. ಒಬ್ಬ ನನ್ನು
ಅಂಟಿಕೊಂಡದ್ದು ಸಾಲದೇ? ನಾನೂ ಬೇಕೆ? ನಿಮ್ಮ

ಪಾಪವು ಈ ಲೋಕದಲ್ಲಿ ಮಾತ್ರವಲ್ಲ ಪರಲೋಕದಲ್ಲೂ ಕ್ಷಮಿಸಲ್ಪಡಲಾರದು. ಎಲೆ, ಹೆಚ್ಚು ಮಾತನಾಡಬೇಡ. ತ್ರಾಟಕೀ, ನನ್ನ ಕೈಯಲ್ಲಿ ಏನಿದೆ ನೋಡು. ಲಜ್ಜೆಗೇಡೀ, ಆತ್ತಸರಿ, ಎಂದು ಹೇಳಿ ಮುಂದಕ್ಕೆ ಸರಿದನು.

ಈ ಮಾತುಗಳನ್ನು ಕೇಳಿ ರಾಮದಾಸನಿಗೆ ಸಂಶಯು ಹುಟ್ಟಿತು. ಇವನು ನನ್ನ ಊರಿನವನೇ? ಅಥವಾ ನನ್ನ ತಮ್ಮನೇ? ಎಂದು ಸಂಶಯುಗೊಂಡನು. ಕೂಡಲೆ ಕಣ್ಣೀರು ಬಂತು. ಆನಂದನು ಸೇಕರನನ್ನು ಕರೆದುಕೊಂಡು ಹೋದನು. ಆ ಹೆಂಗಸರ ಮುಖ ಬಾಡಿತು. ಕಣ್ಣೀರು ಒಸ್ತರಿಸಿತು. ಸೇಕರನನ್ನು ಮೋಸಗೊಳಿಸಬೇಕೆಂದು ಪಾರ್ವತಿಯು ಹಲವು ಪ್ರಯತ್ನಗಳನ್ನು ಹೂಡಿದಳು; ಆದರೆ ಪ್ರಯೋಜನವೇನೂ ಆಗಲಿಲ್ಲ. ಇಬ್ಬರೂ ಮೆಟ್ಟಲುಗಳಿಂದ ಕೆಳಗಿಳಿದರು. ಆನಂದನು ಮುಂದೆ ಹೋಗುತ್ತಲಿದ್ದನು. ಚಂದ್ರಾವತಿ, ಪಾರ್ವತಿಯರು ಬಾಗಿಲ ಹೊರಗೆ ಬಂದು ನೋಡುತ್ತಿದ್ದರು. ಸೇಕರನು ಮೆಲ್ಲ-ಮೆಲ್ಲನೆ ಹೆಜ್ಜೆ ಇಕ್ಕುತ್ತ ಆಲೋಚನಾಮಗ್ನನಾಗಿದ್ದನು. ಅದನ್ನು ಕಂಡು ಪಾರ್ವತಿಯು ಉಪಾಯದಿಂದ ಮಾತನ್ನು ಹೊರಡಿಸಿದಳು.

ಪಾ:—ಅಯ್ಯೋ! ಎಷ್ಟು ಕಷ್ಟ! ಇಲ್ಲಿಂದ ಕೆಳಗಿಳಿದು ಹೋಗಲು ಹಿಂದಿನ ರಾಯರಿಗೆ ಮನಸ್ಸೇ ಆಗದು. ಕಾಲುಗಳು ಹಿಂದೆಯೇ ಎಳೆಯುತ್ತವೆ. ಆನಂದರಾಯರು ರಭಸದಿಂದ ಇಳಿಯುತ್ತಿರುವರಾದರೂ ಇವರಿಗೆ ಹಿಂದೆ

ಯೇ ಎಳೆಯುತ್ತಿದೆ, ಎಂದು ಹೇಳಿ, ತಾನು ರಭಸದಿಂದ ಕೆಳಗಿಳಿದು ಸೇಕರನ ಕೋಟು ಬಲವಾಗಿ ಹಿಡಿದು ನಿಲ್ಲಿ ಸಿದಳು. ಸೇಕರನು ಒಮ್ಮೆಲೆ ಬೆಚ್ಚಿಬಿದ್ದು ನೋಡುವಾಗ, ಆ ಪಿಶಾಚಿ ಬಂದು ಉಪದ್ರವ ಕೊಡುತ್ತಿದ್ದಿತು.

ಇವರಿಗೂ ಭೂತ ಪಿಶಾಚಿಗಳಿಗೂ ಭೇದವಿಲ್ಲ. ಎಲ್ಲಿ ಹೋದರೂ ಇವರ ಕಾಟ ತಪ್ಪುವಂತಿಲ್ಲ. ಅಂತಹ ಮಾರಿಗಳಿವರು, ಎಂದಂದು ಸೇಕರನು ಹಿಂದಕ್ಕೆ ತಿರುಗಿ ನೋಡುವಷ್ಟರಲ್ಲಿ ಪಾರ್ವತಿಯು ಸೇಕರನ ಚಿತ್ರಕ್ಕೆ ಬೆದರಿ ನಾಲ್ಕು ಮೆಟ್ಟಿಲು ಏರಿ ಹೋಗಿ ಕಣ್ಸನ್ನೆಯಿಂದ ಆತನನ್ನು ಹಿಂದಕ್ಕೆ ಕರೆದಳು. ನಿಮ್ಮ ಅವಸ್ಥೆಯನ್ನು ಕಂಡರೆ ನಮ್ಮನ್ನು ಅಗಲಿ ಹೋಗಲು ನಿಮ್ಮ ಮನಸ್ಸೇ ಇಲ್ಲವೆಂದು ತೋರುತ್ತದೆ. ಮಿತ್ರರೇ, ಇಂದೊಂದು ರಾತ್ರಿಯನ್ನು ಇಲ್ಲಿಯೇ ಕಳೆಯಿರಿ, ಎಂದು ಒಯ್ಯಾರದಿಂದ ನುಡಿದು, ಸೇಕರನಿಗೆ ತನ್ನಲ್ಲಿ ಮೋಹ ಹುಟ್ಟುವಂತೆ ನಟಸಿದಳು; ಆದರೆ ಅದು ಫಲಿಸಲಿಲ್ಲ. ಕೇಳಿಯೂ ಕೇಳಿಸದಂತೆ ನಟಿಸಿ ಸೇಕರನು ಸರಾಗವಾಗಿ ಕೆಳಗಿಳಿದು ಆನಂದನ ಬೆನ್ನುಹಿಡಿ ದನು. ಅವರೆಲ್ಲರೂ ಏನು ಮಾಡುತ್ತಿರುವರೆಂಬದನ್ನು ನೋಡಲು ರಾಮದಾಸನು ಕೋಣೆಯಿಂದ ಹೊರಗೆ ಬಂದು, ಪಾರ್ವತಿ ಮತ್ತು ಸೇಕರರ ಮಾತುಕತೆಗಳನ್ನು ಕೇಳುತ್ತಿದ್ದನು. ಪಾರ್ವತಿಯು ನಿರಾಶಳಾಗಿ ಸೇಕರನನ್ನು ಕೈ ಹಿಡಿದು ನಿಲ್ಲಿಸಿ, ಒಂದು ಮುದ್ದನ್ನಾದರೂ ಕೊಡಬೇ ಕಿತ್ತು. ಅಹಾ! ನಿರ್ಭಾಗ್ಯಳಾದೆ! ನಾನು ಇವರನ್ನು ಕೋಣೆ

ಯಿಂದ ಹೊರ ಹೋರಡಲಿಕ್ಕೆ ಬಿಡಬಾರದಿತ್ತು, ಎಂದು ಕಳವಳಪಡುತ್ತಿದ್ದಳು.

ಆನಂದನು ಸೇಕರನೊಡನೆ ಕೆಳಗಿಳಿದನು. ಅಷ್ಟರಲ್ಲಿ ಪಾರ್ವತಿಯು ಸೇಕರನನ್ನು ಮತ್ತೆ ಕರೆದಳು. ಸೇಕರನು ಹಿಂದೆ ನೋಡಲು ಪಾರ್ವತಿಯು ಎರಡೂ ಕೈಗಳಿಂದ ಹಿಂದೆ ಕರೆಯುವದನ್ನು ಕಂಡು ಸಹಿಸಲಾರದಾದನು. ಮೊದಲೇ ಕೋಪದಿಂದ ಕೆಂಪೇರಿದ ಸೇಕರನಿಗೆ ಬಿಸಿ ಎಣ್ಣೆಗೆ ನೀರು ಹೊಯ್ದಂತಾಯಿತು. ಕೋಪದಿಂದ ಆತನು ನಿಮ್ಮಂಥ ಸಾವಿರಾರು ಜನ ಸೂಲಗಿತ್ತಿಯರನ್ನು ನೋಡಿ ರುತ್ತೇನೆ; ಆದರೆ ನಿನ್ನಂಥ ನಿರ್ಲಜ್ಜ, ಕುಲಗೇಡಿ, ಕಾಮ ಪೀಡಿತ, ವಂಚಿಕ, ಸ್ವಾರ್ಥಿಗಳನ್ನು ನಾನೆಲ್ಲಿಯೂ ಕಂಡಿಲ್ಲ. ನಿನ್ನ ಈ ಪಾಪಪೂರ್ಣ ನಾಲಿಗೆಯನ್ನು ಪರಮಾತ್ಮನು ಸುಟ್ಟು ಭಸ್ಮ ಮಾಡದಿರನು. ರಾಮದಾಸನಿಂದ ಹಣ ಸುಲಿದು ಅವನ ಜನ್ಮವನ್ನು ವಿಕ್ರಯಿಸಿದಿರಿ; ನಿಮ್ಮಂಥ ವಂಚಕರು ಈ ಲೋಕದಲ್ಲಿದ್ದರೆ ಪ್ರಪಂಚವು ಕಣ್ಣೀರು ಸುರಿಸುವದೇ ನಿಜ. ನಿಮ್ಮ ಉದ್ಯೋಗಕ್ಕೆ ನರಕವೂ ಸಲ್ಲದು. ನಾಚಿಕೆ ಇಲ್ಲದೆ ನನ್ನನ್ನು ವರಿಸಲು ಪ್ರಯತ್ನಿಸುವ ನಿನಗೆ ಇಂದಿನಿಂದಲೇ ಮಂಕು ಹಿಡಿಯಲಿ! ರಾಮದಾಸನನ್ನು ಹಾಳು ಮಾಡಿದ್ದು ಸಾಕಾಗದೇ? ನಾನೂ ಬೇಕೇ? ನಿಮ್ಮಿಬ್ಬರ ತೊಡೆಯ ಮ್ಯೋಲೆ ಕುಳಿತುಕೊಂಡು ಅವನು ಹೊಟ್ಟೆಗೆ ಅನ್ನವಿಲ್ಲದೇ ನರಳುತ್ತಿದ್ದಾನೆ. ಬೇಗನೆ ಹಣ ಕಳಿಸಿರಿ, ಎಂದು ಈ ಮೂರ್ಖನು ಊರಿಗೆ ಪತ್ರ

ಬರೆಯುತ್ತಿದ್ದನು. ಇದುವರೆಗೆ ಹಣ ಸಿಕ್ಕಿತು; ಆದರೆ ಇನ್ನು ಮಣ್ಣು ತಿನ್ನಬೇಕು. ಹಣವಿದ್ದದರಿಂದ ನಿಮಗೂ ಸುಖವಾಯಿತ್ತು. ಬಗೆಬಗೆಯ ಸುಖವನ್ನು ಒದಗಿಸಿ ಅವನಿಂದ ಹಣವನ್ನು ಸುಲಿದಿರಿ. ಕಷ್ಟದಿಂದ ಗಳಿಸಿದಂಥ ಆ ನನ್ನ ಹಣವನ್ನು ಯಾರ್ಯಾರು ತಿಂದು ತೇಗಿದರೋ, ಅವರು ನನ್ನ ಕಣ್ಣ ಮುಂದೆಯೇ ಸತ್ತು ಮಣ್ಣಾಗುವದು ಖಂಡಿತ. ನಿಮ್ಮ ಸೊಕ್ಕನ್ನು ಸದ್ಯದಲ್ಲಿಯೇ ಇಳಿಸದಿದ್ದರೆ ನಾನು ಬದುಕಿ ಫಲವೇನು! ಎಂದು ಹೇಳಿ, ಸೇಕರನು ಆನಂದನೊಡನೆ ಕೆಳಗಿಳಿದು ಮಾಯವಾದನು.

ರಾಮದಾಸನು ಚಂದ್ರಾವತಿಯ ಹೆಗಲ ಮೇಲೆ ಕೈಯಿಟ್ಟು ಅದನ್ನೆಲ್ಲ ಕೇಳುತ್ತಿದ್ದನು. ಎಚ್ಚರವಿಲ್ಲದೆ ಅವಳ ಹೆಗಲಮೇಲೆ ತಲೆ ಇಟ್ಟುಕೊಂಡು ನಿಶ್ಶಬ್ದನಾದನು. ಅವರಿಬ್ಬರೂ ಮಾಯವಾದ ಬಳಿಕ ಪಾರ್ವತಿಯು ಮೇಲೆ ಬಂದು ನೋಡಲು ರಾಮದಾಸನಿಗೆ ಎಚ್ಚರವಿರಲಿಲ್ಲ. ಇಬ್ಬರೂ ಕೂಡಿ ಅವನನ್ನೆತ್ತಿಕೊಂಡು ಹೋಗಿ ಮಂಚದ ಮೇಲೆ ಮಲಗಿಸಿದರು. ಕೂಡಲೆ ಅವನಿಗೆ ಎಚ್ಚರವಾಯ್ತು. ಆತ ಅತ್ತ ಇತ್ತ ನೋಡಿದ. ಯಾರೂ ಇರಲಿಲ್ಲ. ಬಾಗಿಲು ಇಕ್ಕಿತ್ತು. ಚಂದ್ರಾವತಿ-ಪಾರ್ವತಿಯರು ಸೇಕರನ ಮಾತುಗಳನ್ನು ಕೇಳಿ ಭಯಚಕಿತರಾಗಿದ್ದರು. ಇನ್ನು ಮುಂದೆ ರಾಮದಾಸನನ್ನು ತಮ್ಮಲ್ಲಿ ಪ್ರವೇಶಿಸಗೊಡದಿರುವದೇ ಒಳ್ಳೆಯದೆಂದು ಅವರು ನಿಶ್ಚಯಿಸಿಕೊಂಡಿದ್ದರು. ರಾಮದಾಸನನ್ನು ಮಂಚದ ಮೇಲೆ ಮಲಗಿಸಿ, ಅವರು ಒಳ

ಕೋಣೆಯನ್ನು ಹೊಕ್ಕು ಮಾತು-ಕಥೆ ನಡೆಸಹತ್ತಿದರು. ರಾಮದಾಸನು ಎದ್ದು ನಿಂತು ಬಾಗಿಲು ತೆರೆದು ಬಂದ ವರು ಹೋಗಿರುವರೋ, ಎಂದು ಇಣಿಕಿ ನೋಡಿದ. ಯಾರೂ ಇರಲಿಲ್ಲ. ಕೂಡಲೆ ಕದವನ್ನಿಕ್ಕಿ ಕುರ್ಚಿಯ ಮೇಲೆ ಕುಳಿತು ತಲೆ ತಗ್ಗಿಸಿಕೊಂಡು ಚಿಂತಿಸತೊಡಗಿದ.

---

## ಪರಿಚ್ಛೇದ ೧೧

ನನ್ನ ತಮ್ಮ ಸೇಕರನು ಗುಪ್ತವಾಗಿ ಬಂದು ನನ್ನ ಜೀವನದ ಹೋರಾಟವನ್ನು ಪರೀಕ್ಷಿಸಿದನಲ್ಲ! ಅವನೆಷ್ಟು ಜಾಣ! ಈ ವಿಷಯವನ್ನು ತಾಯಿ ತಿಳಿಯುತ್ತಲೇ ನಿಜ ವಾಗಿಯೂ ಆತ್ಮಹತ್ಯೆ ಮಾಡದಿರಳು. ನಾನಿನ್ನು ಹೇಗೆ ಬಾಳಲಿ? ನನ್ನನ್ನು ಹುಡುಕಿ ತೆಗೆದು, ಪರಿಚಯ ಮಾಡಿ ಕೊಟ್ಟ ಆ ದುಷ್ಟ ಆನಂದನೇ ಇದಕ್ಕೆಲ್ಲ ಕಾರಣನು. ನನ್ನ ಮಿತ್ರನೇ ನನ್ನನ್ನು ಮೋಸಕ್ಕೆ ಗುರಿಪಡಿಸಿದನಲ್ಲವೇ? ನನ್ನ ಪ್ರಾಣವು ಈಗಲೆ ಹಾರಿ ಹೋದರೆ ಮನಸ್ಸಿಗೆ ಶಾಂತಿ ಯಾದರೂ ದೊರೆತೀತು, ಎಂದು ಮನಸ್ಸಿನಲ್ಲಿ ಅಂದು ಕೊಳ್ಳುತ್ತಿದ್ದನು. ಒಳಹೊಕ್ಕ ಸ್ತ್ರೀಯರು ಹೊರಗೆ ಬಂದು ರಾಮದಾಸನ ವಿಚಾರಗಳನ್ನು ತಿಳಕೊಳ್ಳಲು ಪ್ರಾರಂಭಿಸಿದರು.

ಪಾ:—ರಾಮದಾಸರೇ, ಈಗ ಬಂದವರು ನಿಮ ಗೇನಾಗಬೇಕು? ಆಪ್ತರೇ?

ರಾ:-ಅಲ್ಲ, ಅಲ್ಲ, ಆನಂದನು ನನ್ನಹಳೆಯ ಮಿತ್ರ

ಚ:— ಹಾಗಾದರೆ ಮತ್ತೊಬ್ಬರಾರು?

ರಾ:—ಅವನು ನನ್ನ....ನನ್ನ....ತ....ತ್ರ....ತ....

ಪಾ:—ನಿಮ್ಮ ತಮ್ಮನೇ?

ರಾ:-ಅಹುದು; ನಿಜವಾಗಿಯೂ. ನನ್ನತಮ್ಮ ಸೇಕಠ

ಚ:—ಅವರು ಇಲ್ಲಿಗೆ ಬಂದ ಕಾರಣವೇನು?

ರಾ:—ಕಾರಣವನ್ನು ನಾನರಿಯೆ; ಆದರೆ ಇದರಿಂದ ನನಗೆ ಮರಣವೇ ಉಂಟಾದಂತೆ ತೋರುತ್ತದೆ. ನಾನು ಈ ಹಾಳು ಜೀವನ.........

ಪಾ:-ಅದೇನು! ನಿಮ್ಮ ಆಯುಷ್ಯ ಅವರ ಹತೋಟಿ ಯಲ್ಲಿರುವದೇ?

ರಾ:—ಹಾಗಲ್ಲ ಪ್ರಿಯೇ. ಇದರ ಪರಿಣಾಮ ಕಟು ವಾಗಿ ಪರಿಣಮಿಸುವದೆಂದು ನನ್ನ ಮನಸ್ಸು ಹೇಳುತ್ತದೆ.

ಚ:—ನಿಮಗೂ ಅವರಿಗೂ ದ್ವೇಷವೇ?

ರಾ:—ದ್ವೇಷವೇನೂ ಇಲ್ಲ. ನಿಮ್ಮಿಂದಲೇ ಅವನಿಗೆ ದ್ವೇಷ.

ಪಾ: – ಅವರಿಗೆ ನಾವೇನು ಮಾಡಿದೆವು? ಈ ರಾತ್ರಿ ಇಲ್ಲಿ ಇರಬೇಕೆಂದರೆ ನಿಲ್ಲಲಾರದೆ ಹೋಗಿರುವರು. ಒತ್ತಾಯ ಮಾಡಿದುದರ ಫಲವಾಗಿ ಚಿತ್ರದ ಪಟ್ಟನ್ನು ತಿಂದು ಏಳೆಂಟು ಬಳೆಗಳನ್ನೂ ಕಳೆದುಕೊಳ್ಳಬೇಕಾಯ್ತು. ಅವರಿಗೆ ನಮ್ಮಿಂದಾದ ಕಷ್ಟವೇನು?

ರಾ:—ನಿಮ್ಮ ವಿಷಯದಲ್ಲಿಲ್ಲ; ನನ್ನ ಜೀವನದ ವಿಷಯದಲ್ಲಿ ಮಾತ್ರ ಅವನಿಗೆ ನಿಮ್ಮ ಮೇಲೆ ದ್ವೇಷ, ಎಂದು ಹೇಳಿ ಮುಗಿಸುವಷ್ಟರಲ್ಲಿ ಪಾರ್ವತಿ ನಡುವೇ ಬಾಯಿ ಹಾಕಿ:-ದ್ವೇಷವಿದ್ದರೂ ಚಿಂತೆಯಿಲ್ಲ; ಆದರೆ ಅವ ರೆಷ್ಟು ಚಂದ! ಅವರ ಮುಖ ಮಂಡಲವೆಂಬುದು ಹುಣ್ಣಿ ಮೆಯ ಚಂದ್ರನಂತೆ ಪ್ರಕಾಶಿಸುತ್ತಿತ್ತು ಧನಲಕ್ಷ್ಮಿಯು ಆತನನ್ನು ಸಂಪೂರ್ಣವಾಗಿ ಆವರಿಸಿಕೊಂಡಿರುವಳು. ಅಂತಹ ಮಹಾಪುರುಷರು ನಮ್ಮ ಮಿತ್ರರಾದರೆ, ನಿಮ್ಮನ್ನು ಯಾರೂ....ಅದು ಹೇಳಬೇಕಾಗಿಲ್ಲ. ಅದಕ್ಕಾಗಿಯೇ ನಾನು ಮೆಟ್ಟಲುಗಳನ್ನು ಕೆಳಗಿಳಿದು ಅವರನ್ನು....ಹೋ ಡದ್ದು, ಅಂದಳು.

ರಾ:—ಸರಿ, ಸರಿ. ನಿಮ್ಮಂತಹ ಹೆಂಗಸರ ಚಾತು ರ್ಯವೇ ನನಗೆ ಮೋಸ ಕೊಟ್ಟಿತು. ಇಲ್ಲದಿದ್ದರೆ ನಾನು ಇಂಥಹ ಸ್ಥಿತಿಗಿಳಿಯುತ್ತಿದ್ದೆನೇ?

ಪಾ:—ನಿಮ್ಮ ಜನ್ಮವನ್ನು ಸುಡಲಿ. ಆ ಪುರುಷ ನನ್ನು ಕಂಡಷ್ಟೂ ಸಾಕಾಗುತ್ತಿದ್ದಿಲ್ಲ. ಈ ಹೊತ್ತು ಅವರು ಇಲ್ಲಿದ್ದಿದ್ದರೆ ನಮ್ಮ ದೆಸೆಯೇನೆಂದು ಹೇಳುವದು! ಪರ ರಿಂದ ಹೀರುವ ಒಂದು ವರ್ಷದ ವೇತನವನ್ನು ಒಂದೇ ಒಂದು ರಾತ್ರಿಯಲ್ಲಿ ಗಳಿಸುತ್ತಿದ್ದೆವು; ಆದರೆ ದುರದೃಷ್ಟ ದಿಂದ ಅದು ಲಭಿಸಲಿಲ್ಲ. ಎಂದು ಕನಿಕರಪಡುತ್ತಿದ್ದಳು.

---

# ಪರಿಚ್ಛೇದ ೧೨

ಸೇಕರನೂ, ಆನಂದನೂ ಕೆಳಗಿಳಿದವರು ಸ್ವಲ್ಪ ಸಮಯದಲ್ಲಿಯೇ ಮನೆಗೆ ತೆರಳಿದರು ದಾರಿಯಲ್ಲಿ ಸೇಕರ ನಾಗಲೀ, ಆನಂದನಾಗಲೀ ಏನೂ ಮಾತಾಡಲಿಲ್ಲ. ಮನೆಗೆ ತಲುಪಿದಾಗ ರಾತ್ರಿ ಎರಡು ಗಂಟೆಯಾಗಿತ್ತು. ಇಬ್ಬರೂ ಉಡುಪುಗಳನ್ನು ಬದಲಿಸಿ ನಿದ್ರಿಸಿದರು. ನಿದ್ರೆಯ ಸಮಯ ಮೀರಿದ್ದರಿಂದ ಆನಂದನಿಗೆ ಹಾಸಿಗೆ ಹಿಡಿಯುತ್ತಲೇ ನಿದ್ರೆ ಹತ್ತಿತು; ಆದರೆ ಸೇಕರನಿಗೆ ನಿದ್ರೆಯೇ ಬರಲಿಲ್ಲ. ಕಣ್ಣಿಗೆ ಕಣ್ಣು ತಾಗಲಿಲ್ಲ. ಅವನ ಮನಸ್ಸು ಇನ್ನೂ ಶಾಂತವಾಗಿದ್ದಿಲ್ಲ. ಬೆಂಕಿಯ ಜ್ವಾಲೆಗಳು ಅವನ ಹೃದಯದಲ್ಲಿ ಉರಿಯುತ್ತಿದ್ದವು. ಅದರಿಂದ ಒಮ್ಮೊಮ್ಮೆ ಹಾಸಿಗೆಯಿಂದ ಫಕ್ಕನೇ ಎದ್ದು ಕುಳಿತು ಕೊಳ್ಳುವನು. ಅವನಿಗೆ ರಾಮದಾಸನ ಮೇಲಿನ ದ್ವೇಷ ಕ್ಕಿಂತಲೂ ಪಾರ್ವತಿಯ ಮೇಲಿನ ಕೋಪವು ಮಿತಿಮೀರಿ ಹೋಗಿತ್ತು. ಮುಂಬಯಿ ಪಟ್ಟಣದ ಆ ಬಗೆಯ ಸ್ತ್ರೀಯರ ಗುಟ್ಟನ್ನು ಚೆನ್ನಾಗಿ ಪರೀಕ್ಷಿಸಿದ. ಪಾರ್ವತಿಯು ಕೆಳ ಗಿಳಿದು ಬಂದು ತನ್ನನ್ನು ಕರೆದಾಗ ಆ ಪಿಶಾಚಿಯ ಕೇಶ ಗಳನ್ನು ಹಿಡಿದು ಎಳತಂದು, ಕಾಲುವೆಗೆ ದೂಡಿಬಿಡು ವಷ್ಟು ಕೋಪ ಅವನ ತಲೆಗೇರಿತ್ತು; ಆದರೆ ಆನಂದ ನೊಬ್ಬನು ಇದ್ದದ್ದರಿಂದ ಸುಮ್ಮನಾಗಿದ್ದನು.

ರಾತ್ರಿ ಕಳೆಯಿತು. ಬೆಳಗಾಗುತ್ತಲೇ ಆನಂದನು ಎದ್ದನು. ಬೆಳಗಿನ ಫಲಾಹಾರವನ್ನು ಇಬ್ಬರೂ ಮುಗಿಸಿದರು. ಆನಂದನು ತನ್ನ ಆಫೀಸಿಗೆ ಹೊರಡಲು ಸಿದ್ಧನಾದನು. ಸೇಕರನೂ ಉಡುಪುಗಳನ್ನು ಧರಿಸುತ್ತಿರುವದನ್ನು ಕಂಡು ಆನಂದನು ಹಾಸ್ಯರೀತಿಯಲ್ಲಿ ಈಗ ಮತ್ತೆ ರಾಮದಾಸನನ್ನು ಕಾಣಲು ಹೋಗುವೆಯಾ? ಎಂದು ಕೇಳಿದನು.

ಸೇಕರನು ಅದನ್ನು ಕೇಳಿಯೂ ಕೇಳದವನಂತೆ ನಟಿಸಿ ಉಡುಪುಗಳನ್ನು ಸರಿ ಮಾಡುವದರಲ್ಲಿಯೇ ಮಗ್ನನಾಗಿದ್ದನು; ಆದರೂ ಅವನನ್ನು ಮಾತನಾಡಿಸಬೇಕೆಂದು ಆನಂದ ಪುನಃ—ರಾಮದಾಸನೆನ್ನು ಕಂಡಾಯಿತಲ್ಲವೇ? ಹೇಗಿದ್ದಾನೆ? ನಿನ್ನ ಅಣ್ಣನ ಜೀವನದ ಹೋರಾಟವು ಯಾವ ಬಗೆ ಎಂಬದು ತಿಳಿದಹಾಗಾಯ್ತು; ಇನ್ನು ಮನಸ್ಸಿಗೆ ಸಮಾಧಾನವಿಲ್ಲವೇ ಸೇಕರ?

ಸೇ:— ಅವನು ನನ್ನ ಅಣ್ಣನಲ್ಲ; ಆತನು ಸೂಳೆಯರ ಗಂಡ, ಎಂದು ಗಂಭೀರವಾಗಿ ನುಡಿದನು.

ಆನಂದನಿಗೆ ನಗೆ ಬಂತು.

ಆ:— ನೀನು ತಾಯಿಗೆ ರಾಮದಾಸನ ವಿಷಯದ ಪತ್ರ ಬರೆಯುವದಿಲ್ಲವೇ? ಆಕೆ ಪುತ್ರವಾತ್ಸಲ್ಯದಿಂದ ಎಷ್ಟು ಕೊರಗಿ ಹೋಗಿರುವಳೋ ತಿಳಿಯದು. ಬೇಗನೆ ಬರೆ. ನಾನೀಗ ಆಫೀಸಿಗೆ ಹೋಗುತ್ತೇನೆ. ನೀನು ಇಲ್ಲಿಯೇ ವಿಶ್ರಮಿಸು. ಮಧ್ಯಾಹ್ನ ಹಿಂದಿರುಗುವೆನು, ಎಂದು ಹೇಳಿ ಹೊರಟು ಹೋದ. ಸೇಕರನು ಸ್ವಲ್ಪ ಹೊತ್ತು ಅಲ್ಲಿ ಕುಳಿತು

ಕೊಂಡು ಘಂಟೆ ಹನ್ನೊಂದಕ್ಕೆ ಮನೆ ಬಿಟ್ಟು ರಾಜ ರಸ್ತೆ ಗಿಳಿದು ಮುಂದುವರಿಸಿದ. ನೆಟ್ಟಗೆ ಆನಂದನ ಆಫೀಸಿಗೆ ಹೋಗಿ-ನಾನಿಂದು ಊರಿಗೆ ಕೊರಡಬೇಕೆಂದು ಮಾಡಿ ದ್ದೇನೆ. ಆದ್ದರಿಂದ ನೀವು ಮಾಡಿದ ಉಪಕಾರಗಳಿಗೆ ಕೊನೆಯದಾಗಿ ಬಂದು ನಿಮಗೆ ನಮಸ್ಕಾರ ಮಾಡಿ ಹೋಗೋಣವೆಂದು ಇಲ್ಲಿಗೆ ಬಂದುಬಿಟ್ಟೆ, ಎಂದನು.

ಸೇಕರನೂ, ಆನಂದನೂ ಪರಮ ಮಿತ್ರರು. ಆನಂದ ನಿಗೆ ಹಾಸ್ಯವೆಂದರೆ ಬಲು ಇಷ್ಟ. ಸಂತೋಷವಿದ್ದರೆ ಊಟವನ್ನೂ ಬಿಡುತ್ತಿದ್ದನು. ಸೇಕರನನ್ನು ಕಂಡರೆ ಆನಂ ದನಿಗೆ ನಗು ಬರುತ್ತಿತ್ತು. ಸೇಕರನಿಗೂ, ಪಾರ್ವತಿಗೂ ಆದ ಜಗಳ ಮತ್ತು ಮಾತು ಕತೆಗಳನ್ನು ನೆನೆಸಿದರೆ ನಗು ಉಕ್ಕಿ ಉಕ್ಕಿ ಬರುತ್ತಿತ್ತು. ಸೇಕರನು ಅಲ್ಲಿಗೆ ಬರುತ್ತಲೇ ಆನಂದನು ಹೊರಬಂದನು.

ಆ:-ಛೇ! ಛೇ! ಇಷ್ಟು ಬೇಗನೆ ಹೊರಟೆಯೇನು? ರಾಮದಾಸನ ಮಿಕ್ಕ ವಿಚಾರಗಳೆಲ್ಲವನ್ನೂ ತಿಳಿದುಕೊಂಡು ಹೋಗಬೇಕು. ಇದುವರೆಗೂ ಸರಿಯಾಗಿ ಹಣ ಬರು ತ್ತಿತ್ತು. ಮನಸ್ಸು ಬಂದಂತೆ ಅವರಿಗೆ ತಿನ್ನಿಸುತ್ತಿದ್ದನು. ಇನ್ನು ಇರುವದು ಹತ್ತೇ ರೂಪಾಯಿ ಎಂದು ನಾವು ನಿನ್ನೆಯೇ ನೋಡಿದ್ದೇವಲ್ಲವೇ? ಅಂದಬಳಿಕ ಅವನ ಜೀವ ನದ ಅವಸ್ಥೆಯನ್ನು ತಿಳಿಯಬೇಕು. ಇಲ್ಲಿಯ ಸ್ತ್ರೀಯರೆಂ ದರೆ ಹಣವಿರುವ ತನಕ ಮಾತ್ರ ಸ್ನೇಹ, ಪ್ರೇಮ, ಪ್ರೀತಿ, ಹಣವಿಲ್ಲದಿದ್ದರೆ, ಪರಿಚಯವಿಲ್ಲ. ಆಶ್ರಯ ಕೊಡು

ವುದಿಲ್ಲ. ಆದ್ದರಿಂದ ರಾಮದಾಸನಿಗೆ ಅಂತ್ಯಕಾಲ ಸಮೀ
ಪಿಸಿದೆ. ಅವನ ಅವಸ್ಥೆ ಯಾವ ರೀತಿ ಮಾರ್ಪಾಟಾಗು
ತ್ತಿದೆಯೆಂದು ತಿಳಿದೇ ಊರಿಗೆ ತೆರಳು.

ಸೇ:-ಸರಿ! ಸರಿ. ಹಾಗೆಯೇ ಮಾಡಬೇಕು. ಹಾಗಾ
ದರೆ ಮನೆಯ ಕಡೆಗೆ ಪತ್ರಬರೆಯಲು ಏನು ಮಾಡುವದು?

ಆ:—ಪತ್ರ ಬರೆಯಲಿಕ್ಕೇನು ಅಡ್ಡಿ? ತಾಯಿಗೆ
ಬೇಕಾದ ರೀತಿಯಲ್ಲಿ ಪತ್ರ ಬರೆದರೆ ಸರಿಯಲ್ಲವೇ? ರಾಮ
ದಾಸನು ಬೊಂಬಾಯಿಯಲ್ಲಿ ಸೌಖ್ಯದಿಂದಿದ್ದಾನೆ. ಹಗಲು
ರಾತ್ರಿ ಕೆಲಸ ಮಾಡಿ ಹಣವನ್ನು ವ್ಯರ್ಥಮಾಡುತ್ತಾನೆ;
ಅಲ್ಲ, ಅಲ್ಲ, ಹಣವನ್ನು ಗಳಿಸುತ್ತಾನೆ. ನೀವು ಇದುವರೆಗೆ
ಕಳುಹಿಸಿದ ಹಣವನ್ನೆಲ್ಲಾ ಬರುವ ತಿಂಗಳಿನಿಂದ ತಿರುಗಿ
ಕಳುಹಿಸುತ್ತೇನೆಂದು ಹೇಳುತ್ತಾನೆ, ಎಂದು ಬರೆದರೆ ಸರಿ.
ತಾಯಿಗೆ ಸ್ವಲ್ಪ ದಿನವಾದರೂ ನಿದ್ರೆ ಹತ್ತಬಹುದಲ್ಲವೇ?

ಸೇಕರನು ತುಸ ಸುಮ್ಮನಿದ್ದು ಅದೇ ಉತ್ತಮ
ವೆಂದು ನಿಶ್ಚಯಿಸಿ ಅಫೀಸಿನ ಒಳಹೊಕ್ಕ ಆನಂದನೂ,
ಸೇಕರನೂ ಕುಳಿತುಕೊಂಡರು. ಸೇಕರನು ಒಂದು ಕಾಗದ
ಬರೆದು ಅಲ್ಲಿಯೇ ಇರುವ ಟಪಾಲು ಕರಡಿಗೆಗೆ ಹಾಕಿ
ದನು. ಇನ್ನು ಕೊನೆಯದಾಗಿ ರಾಮದಾಸನಿಗೂ ಒಂದು
ಯುಕ್ತವಾದ ಕಾಗದ ಬರೆದು ಹಾಕಬೇಕೆಂದು ರಾತ್ರಿ
ಯಿಂದ ಆಲೋಚಿಸುತ್ತಿದ್ದನು. ಆ ಆಲೋಚನೆಯು
ಯೋಗ್ಯವಾದದ್ದೆಂದು ತಿಳಿದು ಬರೆಯಲು ತೊಡಗಿದನು.
ಆತನ ಆಲೋಚನೆಗೆ ಆನಂದನೂ ಒಪ್ಪಿಕೊಂಡನು.

ರಾಮದಾಸನಿಗೆ—

ತನ್ನ ಸೇಕರನು ಈ ಕಾಗದ ಮೂಲಕ ತಿಳಿಸುವ ಮನಸ್ಸಂತಾಪದ ಕೊನೆಯ ಎರಡು ವಾಕ್ಯಗಳು. ನಿನ್ನ ಕೆಟ್ಟ ಜೀವನವನ್ನು ಕಣ್ಣಾರೆ ಕಾಣಬೇಕೆಂದು ನಾನು ಬೊಂಬಾಯಿಗೆ ಬಂದು ಇಂದಿಗೆ ಒಂದೂವರೆ ತಿಂಗಳಾಯ್ತು. ನಿನ್ನ ಪತ್ತೆ ಹತ್ತದೆ ಒಂದು ತಿಂಗಳು ಕಳೆಯಿತು. ಕೊನೆಗೆ ನಿನ್ನ ಉಪ್ಪರಿಗೆಯನ್ನು ಕಂಡು ಹಿಡಿದು ನಿನ್ನನ್ನೂ ಕಂಡದ್ದಾಯ್ತು. ಆನಂದನೊಬ್ಬನಿರದಿದ್ದರೆ ನಿನಗೆ ನಾನೀಗಲೂ ಹಣ ಕಳುಹಿಸುತ್ತಲೇ ಇರುತ್ತಿದ್ದೆ; ಆದರೆ ಅವನು ನಿನ್ನ ವಿಚಾರ ತಿಳಿಸಿದ ಬಳಿಕ ನಾನು ಹಣ ಕಳುಹಿಸುವದನ್ನು ನಿಲ್ಲಿಸಿ ಬಿಟ್ಟೆ. ಆಗಲೇ ನಿನ್ನ ಮನಸ್ಸಿಗೆ ಅದರ ಕಾರಣ ಹೊಳೆಯಬಹುದಿತ್ತು; ಆದರೆ ನಿನ್ನೊಂದಿಗಿರುವ ಆ ಪಂಚಕ ಸ್ತ್ರೀಯರ ವರ್ತನೆ ಮತ್ತು ನಿನ್ನ ಅವಸ್ಥೆ ಇವುಗಳನ್ನು ಕಂಡು ನನಗೆ ಬಹು ಕನಿಕರವುಂಟಾಯ್ತು. ಇನ್ನು ನೀನು ಪರಿವರ್ತಿಸುವ ಆಶೆಯಿಲ್ಲ. ನಿನಗೆ ಖಂಡಿತವಾಗಿಯೂ ಕೇಡುಗಾಲ ಸಮೀಪಿಸಿದೆ. ನಮ್ಮೆದುರು ಸುಳ್ಳು ಹೇಳಿ ಹೀರಿದ ಹಣವನ್ನು ಆ ಮಾರಿಗಳ ಹೆಣಕ್ಕೆ ಸುರಿದು ನಮ್ಮನ್ನು ವಂಚಿಸಿ ಹೆಚ್ಚಾದ ನಷ್ಟಕ್ಕೆ ಗುರಿಪಡಿಸಿದೆ: ನೀನು ಪರಸ್ತ್ರೀಯರೊಡನೆ ಸೇರಿ ಸುಖಪಡೆದೆ; ನಮ್ಮನ್ನು ಕಷ್ಟಕ್ಕೆ ಈಡು ಮಾಡಿದೆ. ತಾಯಿಯಲ್ಲಿರುವ ಆಭರಣಗಳನ್ನು ಮಾರಿಸಿದೆ. ಇದೆಲ್ಲವೂ ನಿನ್ನ ಜ್ಞಾನದ ಬಲಾತ್ಕಾರ. ನೀನು ಬಿ. ಎ. ದ ವರೆಗೆ ಓದಿದರ

ಪರಿಣಾಮವಿದು. ನಿನಗೆ ವಿದ್ಯೆ ಕಲಿಸುವ ಬದಲು ಒಬ್ಬ
ಬಡ ವಿದ್ಯಾರ್ಥಿಗೆ ಕಲಿಸಿದ್ದರೆ, ಆತನು ಇಂದು ಜನಾಂಗ
ದಲ್ಲಿ ಉಚ್ಚ ಪದವಿಯನ್ನು ಪಡೆದು ಆ ವಿದ್ಯೆಯ ಫಲವನ್ನು
ಸಾರ್ಥಕಗೊಳಿಸುತ್ತಿದ್ದನು; ಆದರೆ ನಿನ್ನಿಂದ ಆದ ಕಲಿಸ
ಎಂಪರಿ ಒಂದೇ ಒಂದು. ಹಲಕೆಲವು ಸ್ತ್ರೀಯರನ್ನು ತೆಕ್ಕೆ
ಬಿದ್ದು. ನಿನ್ನ ಜನ್ಮವನ್ನು ಕೆಡಿಸಿದೆ. ನಿನ್ನಿಂದಾಗಿ ನನಗೂ
ಸೌಖ್ಯವಿಲ್ಲ. ಜನರಲ್ಲಿ ಹೇಗೆ ತಾನೇ ಮೋರೆ ತೋರಿಸಲಿ?
ನಿನ್ನಿಂದ ಬಗೆ ಬಗೆಯ ನಿಂದೆಯನ್ನು ಕೇಳಬೇಕಾಯ್ತು.
ನಿನ್ನೆ ರಾತ್ರಿ ನಾನು ನಿನ್ನನ್ನು ಕಂಡಂದಿನಿಂದ ನನ್ನ ಪ್ರಾಣವೇ
ಹಾರಿದಂತಾಗಿದೆ. ಆ ಸೊಕ್ಕಿದ ಮಾರಿ ಪಾರ್ವತಿಯನ್ನು
ನಾನು ನಿನ್ನೆಯೇ ಯಮಲೋಕಕ್ಕೆ ಕಳುಹಿಸುತ್ತಿದ್ದೆ.
ನಿನ್ನಂತಹ ಹೆಡ್ಡನನ್ನು ಸೆರೆ ಹಿಡಿದಿರುವಳೆಂಬ ಹೆಮ್ಮೆ
ಯಿಂದ ಆಕೆ ನನ್ನನ್ನೂ ವಂಚಿಸಲು ಪ್ರಯತ್ನಿಸಿದಳು.
ನನ್ನನ್ನು ಮುಟ್ಟಲು ಬಂದಾಗ ನನ್ನ ಚಿತ್ತದಿಂದ ಕೊಟ್ಟ
ಪೆಟ್ಟಿಗೆ ಕೈಯಲ್ಲಿದ್ದ ಬಳೆಗಳೆಲ್ಲವೂ ಹುಡಿಹುಡಿಯಾಗಿದ್ದು
ಅವಳಿಗೆ ಸಾಲಲಿಲ್ಲ. ಆದರೂ ಅವಳು ಪುನಃ ತನ್ನ ವಂಚಕ
ಚಾತುರ್ಯವನ್ನು ನಡೆಯಿಸಿದಳು. ನೀನೀಗ ಬಂಧು ಬಳಗ
ವನ್ನು ಬಿಟ್ಟು ಯಾರನ್ನು ಪ್ರೀತಿಸುತ್ತಿರುವೆಯೋ ಮತ್ತು
ಯಾರೊಡನೆ ನೀನು ಸಹಕರಿಸಿಕೊಂಡಿರುವಿಯೋ ಅಂಥ
ವರು-ಇನ್ನು ಕೆಲವೇ ದಿನಗಳಲ್ಲಿ ನಿನ್ನನ್ನು ವಕ್ರದೃಷ್ಟಿಯಿಂದ
ಕಂಡು ತಮ್ಮಲ್ಲಿಂದ ಹೊರದಬ್ಬದೇ ಇರಲಾರರು. ಅವರೇ
ನಿನ್ನ ಭಯಂಕರ ಮರಣಕ್ಕೆ ಕಾರಣರಾಗುವರು. ಆ

ಸೊಕ್ಕಿನ ಪಾರ್ವತಿಯನ್ನೂ ನಿನ್ನೊಂದಿಗೆ ನಿಂತು ವಿನೋದ ನೋಡುತ್ತಿದ್ದ ಆ ಧೂರ್ತ ಚಂದ್ರಾವತಿಯನ್ನೂ ನಿನ್ನನ್ನೂ ಒಂದೇ ಹಗ್ಗದಿಂದ ಕಟ್ಟಿ ಸಮುದ್ರಕ್ಕೆಸೆಯದಿದ್ದರೆ ನಾನು ಸೇಕರನೇ ಅಲ್ಲವೆಂದು ತಿಳಿ.

ಸೇಕರ.

ಆಯಿತು. ಪತ್ರ ಬರೆದು ಮುಗಿಯುತ್ತಲೇ ವಿಳಾಸ ಬರೆದು ಅದನ್ನೂ ಟಪಾಲು ಕರಂಡಿಗೆಗೆ ಎಸೆದನು. ಘಂಟೆ ಒಂದಾಗುತ್ತಲೇ ಆನಂದನೂ, ಸೇಕರನೂ ಆಫೀಸಿನಿಂದ ಮನೆಗೆ ಹೊರಟು ಹೋದರು.

---

## ಪರಿಚ್ಛೇದ ೧೩

ನಾವೀಗ ಊರ ಕಡೆಗೆ ಹೋಗಿ ನೋಡೋಣ. ಸೇಕರನು ಮನೆ ಬಿಟ್ಟು ಒಂದೂವರೆ ತಿಂಗಳಾಗಿತ್ತು. ಆತ ಹೋದ ನಂತರ ಸೇಕರನಿಂದಾಗಲೀ, ರಾಮದಾಸನಿಂದಾಗಲಿ ಪತ್ರಗಳು ಬಂದಿರಲಿಲ್ಲ. ಪ್ರಿಯ ಓದುಗರೇ, ಪುತ್ರ ವಾತ್ಸಲ್ಯದಿಂದ ಕೊರಗುತ್ತಿರುವ ಆ ಮುದುಕಿಯ ಮನಸ್ಸು ಎಷ್ಟರ ಮಟ್ಟಿಗೆ ಕಳವಳ ಪಡುತ್ತಿರಬಹುದೆಂಬದನ್ನು ತಾವೇ ಯೋಚಿಸಿರಿ.

ಕಗ್ಗತ್ತಲೆ ಕವಿದಿತ್ತು. ಗವಿಯಂತೆ ಕಾಣುವ ಒಂದು ಗುಡಿಸಲೊಳಗೆ ಒಂದು ಚಿಕ್ಕ ದೀಪವು ಮಿಣುಗುತ್ತಿತ್ತು. ಸುತ್ತಲೂ ಗಿಡಗಂಟೆಗಳು ತುಂಬಿಕೊಂಡಿದ್ದರಿಂದ ಆ ಗುಡಿ

ಸಲು ಕಾಣುತ್ತಲೇ ಇರಲಿಲ್ಲ. ಅದರಲ್ಲಿ ಆ ಕವಿದ ಕಗ್ಗ ತ್ತಲೆಯಲ್ಲಿ ಬಹು ಚಿಕ್ಕದಾಗಿ ಉರಿಯುತ್ತಿರುವ ದೀಪವು ಮಿಂಚು ಹುಳದ ಬೆಳಕಿನಲ್ಲಿ ಯಾವುದೆಂದು ತಿಳಿಯುತ್ತಿರ ಲಿಲ್ಲ. ಅದು ಮಳೆಗಾಲ, ಗುಡಿಸಲದ ಬಾಗಿಲಲ್ಲಿ ಯಾರೋ ಒಬ್ಬರು ತಲೆ ತಗ್ಗಿಸಿ ಕುಳಿತುಕೊಂಡು ಕಣ್ಣಲ್ಲಿ ನೀರು ಸುರಿಸುತ್ತಾ ದುಃಖಿಸುತ್ತಿರುವಂತೆ ಕಾಣುತ್ತಿತ್ತು. ಮುಖ ಮಂಡಲವು ಬಾಡಿದ ಹೂವಿನಂತೆ ಮುದ್ದೆಯಾಗಿತ್ತು. ನೀರಿಗೆಗಳು ಮೋರೆಯ ಮೇಲೆ ಉದ್ದುದ್ದವಾಗಿ ನೇತಾ ಡುತ್ತಿದ್ದವು. ವೃದ್ಧರ ಛಾಯೆಯೇ ಆ ಮುಖದಲ್ಲಿ ಕಂಡು ಬರುತ್ತಿತ್ತು. ಕೆಲವು ಚಿಕ್ಕ ಮಕ್ಕಳು ಪರಮಾತ್ಮನ ಭಜನೆ ಯಲ್ಲಿ ನಿರತರಾಗಿದ್ದರು. ಆ ವೃದ್ಧ ವ್ಯಕ್ತಿ ಅಚಲಿತ ದೃಷ್ಟಿ ಯಿಂದ ಹೊರಗಡೆ ನೋಡಿ ಚಿಂತಿಸುತ್ತಿತ್ತು. ರಕ್ತಛಾಯೆ ಯಿಲ್ಲದ ಆ ಮುಖವು ತಲೆಯೊಂದಿಗೆ ಸೇರಿ ತನ್ನ ದೇಹಕ್ಕೂ ಭಾರವಾಗಿ ಕೆಳಕ್ಕೆ ತಗ್ಗಿ ಹೋಗಿತ್ತು. ಮನಸ್ಸಿನಲ್ಲಿ ಎಣಿಸಿ ದಂತೆಯೇ ಬಾಯಲ್ಲಿಯೂ ಮೆಲ್ಲಮೆಲ್ಲನೆ ಏನೋ ಗುಣು ಗುಟ್ಟುತ್ತಿದ್ದಳು. ಇವಳೇ ಪುತ್ರವಾತ್ಸಲ್ಯದಿಂದ ಕೊರ ಗುತ್ತ ಚಿಂತಿಸುತ್ತಿರುವ ರಾಧೆ. ಇವಳೇ ಮಕ್ಕಳ ಪತ್ರ ಗಳನ್ನು ನಿರೀಕ್ಷಿಸುತ್ತ ಕುಳಿತವಳು. ಅಷ್ಟರಲ್ಲಿಯೇ ಸೇಕ ರನ ಅಳಿಯ, ರಾಧೆಯ ಮೊಮ್ಮಗ, ಭಂಡಸಾಲೆಯಿಂದ ಮನೆಗೆ ಬಂದು ಸೇಕರನ ಪತ್ರ ಬಂದಿದೆ, ಎಂದು ಹೇಳಿ ದನು. ಮುದುಕಿಗೆ ಜೀವ ಬಂತು. ಪತ್ರ ಬಂದಿದೆಯೇ? ಏನೆಂದು? ರಾಮದಾಸನಿಗೆ ಸೌಖ್ಯವಂತೆಯೇ? ಸೇಕರ

ನಿಗೂ ಸೌಖ್ಯವೇ? ಎಂದು ಬಗೆ ಬಗೆಯ ಪ್ರಶ್ನೆಗಳನ್ನು ಕೇಳಲಾರಂಭಿಸಿದಳು. ಪ್ರಿಯ ಓದುಗರೇ, ಸೇಕರನು ಬರೆದ ಪತ್ರವೇನಿತ್ತೆಂಬದನ್ನು ನೀವು ಈ ಮೊದಲೇ ಓದಿ ರುವಿರಿ. ಆದ್ದರಿಂದ ಅದನ್ನು ಪುನಃ ಬರೆಯುವದಿಲ್ಲ.

ಪತ್ರ ಓದಿ ತಿಳಿಯುತ್ತಲೇ ರಾಧೆಯು ನೆಟ್ಟಗೆ ಸ್ವರ್ಗಕ್ಕೇ ಹಾರಿದಳು. ಸಂತೋಷವೇ ಸಂತೋಷ! ರಾಮದಾಸನು ಸೌಖ್ಯದಲ್ಲಿದ್ದು, ಉದ್ಯೋಗದಿಂದ ಹಣ ಗಳಿಸುತ್ತಿರುವನೆಂದರೆ ಸಂತೋಷವೇಸರಿ! ಅದರಲ್ಲಿಯೂ ತಾಯಿಯಿಂದ ಇದುವರೆಗೆ ಕೊಂಡು ಹೋದ ಹಣವನ್ನು ಹಿಂದಕ್ಕೆ ಕಳುಹಿಸುವನೆಂದರೆ ಇದಕ್ಕಿಂತ ಮಿಗಿಲಾದ ಸಂತೋಷ ಮತ್ತಾವುದಿರುವದು? ರಾಧೆಯ ಮನಸ್ಸಿನ ಸಂತೋಷವು ವರ್ಣಿಸಲಸಾಧ್ಯವಾಯಿತು. ಒಂದೇ ಒಂದು ನಿಮಿಷದಲ್ಲಿ ಅವಳ ದುಃಖವು ಮಾಯವಾಯ್ತು. ಸಂತೋಷವು ಮನಸ್ಸಿನಲ್ಲಿ ಉಕ್ಕಿ ಬಂದು ತಡೆಯಲಾರ ದಾಯಿತು. ಆದರಿಂದ ಅವಳು ಗಾಳಿ ಗೋಪುರಗಳನ್ನು ಕಟ್ಟಲುಪಕ್ರಮಿಸಿದಳು. ರಾಮದಾಸನಿಂದ ಬರುವ ಹಣ ದಿಂದ ಪುನಃ ಮೊದಲಿನಂತೆ ಆಭರಣಗಳನ್ನು ಮಾಡಿಸ ಬೇಕೆಂದು ಭಾವಿಸಿದಳು. ಸೇಕರನಿಗೆ ಅದರಿಂದ ಒಂದು ಕಾಸನ್ನೂ ಕೊಡಬಾರದೆಂದು ನಿಶ್ಚಯಿಸಿದಳು. ಹೀಗೆಲ್ಲಾ ಗಾಳಿ ಗೋಪುರಗಳನ್ನು ಕಟ್ಟುತ್ತಾ ಸಂತೋಷ ಭರಿತಳಾಗಿ ಒಳಮನೆಯನ್ನು ಸೇರಿದಳು. ಪ್ರಿಯ ಓದುಗರೇ, ಮಗ ನಿಂದ ಹಣ ಬರುತ್ತದೆಂದು ಕೇಳುತ್ತಲೇ ಅವಳಲ್ಲಿ ಸ್ವಾರ್ಥ

ವು ಹುಟ್ಟಿತು. ಹೃದಯದಲ್ಲಿ ದ್ವೇಷದ ವಿಷವುದ್ಭವಿಸಿತು. ಸೇಕರನಿಗೆ ಆ ಹಣವಲ್ಲಿ ಕಿಂಚಿತ್ತೂ ಕೂಡ ಕೊಡಬಾರದೆಂದಾಯ್ತು. ತಿಳಿದಿರಾ, ಹೆಂಗಸರ ಬುದ್ಧಿಯನ್ನು. ಇವಳು ವೃದ್ಧೆಯಾದರೂ ಇಷ್ಟನ್ನೆಲ್ಲಾ ಆಲೋಚಿಸಿದಳು. ಅಲ್ಲದೆ ಗಟ್ಟಿಮುಟ್ಟಾದ ತರುಣಿಯಾಗಿದ್ದರೆ ಇನ್ನೇನು ಅವಸ್ಥೆ? ಯಾವ ಕಾರಭಾರಗಳನ್ನು ನಡೆಯಿಸುತ್ತಿದ್ದಳೋ ಆ ಪರಮಾತ್ಮನೊಬ್ಬನೇ ಬಲ್ಲ!

---

## ಪರಿಚ್ಛೇದ ೧೪

ಇತ್ತ ಸೇಕರನ ಕಾಗದ ರಾಮದಾಸನಿಗೆ ಇಷ್ಟರಲ್ಲಿಯೇ ತಲುಪಿರಬೇಕಷ್ಟೇ? ಅವನಿಗೆ ಆ ಕಾಗದ ಈ ಮೊದಲೇ ಸಿಕ್ಕಿತ್ತು. ಆ ಪತ್ರ ಕಂಡ ಕೂಡಲೆ ತಾಯಿಯ ಪತ್ರವಾಗಿರಬಹುದೆಂದೂ ಹಣ ಕಳುಹಿಸುವ ವಿಷಯವೇನಾದರೂ ಇರಬಹುದೆಂದೂ ಬಲವಾದ ಹಣದ ಆಶೆಯಿಂದ ಬೇಗ ಬೇಗನೆ ಅದನ್ನು ಬಿಚ್ಚಿ ಓದಲಾರಂಭಿಸಿದ. ಆ ಪತ್ರವು ಸೇಕರನದಾಗಿತ್ತು. ಕೂಡಲೆ ಆತನ ತಲೆ ತಿರುಗಿತು. ಆ ಕಾಗದವು ಕೈಯಿಂದ ಕೆಳಕ್ಕೆ ಉದುರಿತು. ಮೈಯೆಲ್ಲಾ ನಡುಗಲಾರಂಭಿಸಿತು. ಬೆವರಿನಿಂದ ವಸ್ತ್ರ[illegible] ಒದ್ದೆಯಾಯಿತು. ತಾನು ಎಲ್ಲಿದ್ದೇನೆಂಬದು ಆತನಿಗೆ ತಿಳಿಯದಾಯ್ತು. ಅಲ್ಲಿಯೇ ಕುಳಿತುಕೊಂಡ. ಅಲ್ಪಾವಧಿಯಲ್ಲಿ ಎಚ್ಚತ್ತು ಪುನಃ ಪತ್ರವನ್ನು ಓದಿದ. ಹೆದರಿಕೆಯಾಯ್ತು.

ಹೃದಯ ಬಡಿತ ವೇಗವೇಗವಾಗಿ ಸಾಗಿತು. ಪತ್ರವನ್ನು ಕಿಸೆಯಲ್ಲಿಟ್ಟುಕೊಂಡು ಹೋಟೆಲಿನಲ್ಲಿ ಊಟವನ್ನು ತೀರಿಸಿದ. ಅನ್ನವೇನೂ ರುಚಿಸಲಿಲ್ಲ. ವಿಶ್ರಾಂತಿಗಾಗಿ ಎಲ್ಲಿಗೆ ಹೋಗುವದೆಂದು ಚಿಂತಿಸುತ್ತಿದ್ದ. ಕೈಯಲ್ಲಿ ಕಾಸಿರಲಿಲ್ಲ. ಕೇವಲ ಹತ್ತೇ ರೂಪಾಯಿಗಳಿದ್ದುದನ್ನು ಸೇಕರನು ಸಂದರ್ಶಿಸಿದ ಮೂರನೆಯ ದಿನವೇ ಆ ವೇಶ್ಯೆಯರು ಹೀರಿಕೊಂಡಿದ್ದರು. ಇನ್ನು ಇವನ ಹತ್ತರ ಹಣವಿಲ್ಲವೆಂದು ಅವರಿಗೂ ತಿಳಿದಿತ್ತು. ತನ್ನಲ್ಲಿ ಹಣವಿಲ್ಲದ್ದರಿಂದ ಅಲ್ಲಿಗೆ ಹೋಗಲಿಕ್ಕೂ ಮನಸ್ಸಾಗಲಿಲ್ಲ. ಆ ದಿನ ಹೋಟಲಲ್ಲಿಯೇ ಮಲಗಿದ; ಆದರೆ ಪಾಪ ಆ ಸ್ತ್ರೀಯರೊಂದಿಗೆ ಸೇರಿ ಸುಖವಾಗಿ ನಿದ್ರಿಸುತ್ತಿರುವವನಿಗೆ ಈ ಹೊಟಲಿನಲ್ಲಿ ಹೇಗೆ ನಿದ್ರೆ ಬರಬೇಕು? ಹೇಗೊ ಕಷ್ಟದಿಂದ ಬೆಳಗಿನವರೆಗೂ ಕುಳಿತು ಮಲಗಿ ಹೀಗೆ ಮಾಡಿ ರಾತ್ರಿಯನ್ನು ದೂಡಿದ. ಹಗಲನ್ನೆಲ್ಲ ಅಲ್ಲಿಯೇ ಕಳೆದ. ಹಣವಿಲ್ಲದಿದ್ದರೆ ರಾತ್ರಿಹೊತ್ತಿಗೆ ಅವರು ಬಾಗಿಲು ತೆರೆಯಲಾರರೆಂದು ತಿಳಿದು, ಸಂಜೆಯಾಗುತ್ತಲೇ ಉಪ್ಪರಿಗೆಯನ್ನು ಏರಿದ. ಇವನ ಕಡೆಗೆ ಅವರು ಗಮನಿಸಲೇ ಇಲ್ಲ. ಇವನೊಂದಿಗೆ ರೊಕ್ಕಪ್ಪನಿಲ್ಲವೆಂದು ತಿಳಿದರೂ, ಇವನು ಅಲ್ಲಿಗೆ ಹೋಗಿ ಉಪದ್ರವ ಕೊಡುತ್ತಿದ್ದುದಕ್ಕಾಗಿ ಒಂದು ಸ್ಥಳವನ್ನು ಕೊಟ್ಟರು. ರಾತ್ರಿಯನ್ನೆಲ್ಲ ರಾಮದಾಸನು ಆ ಮೂಲೆಯಲ್ಲೆ ಕಳೆದು ಬೆಳಗಾಗುತ್ತಲೆ ಹೊರ ಹೋಗುತ್ತಿದ್ದನು. ಈಗ ಕಾಫಿ ಮತ್ತು ಮಿಠಾಯಿಗಳು ಇವನಿಂದ ನಾಯವಾಗಿದ್ದವು. ಅದು ಬಿಟ್ಟು ರಾತ್ರಿ

ನಿದ್ರಿಸಲಿಕ್ಕೆ ಒಂದು ಯೋಗ್ಯಸ್ಥಳವನ್ನಾದರೂ ಕೊಡದೆ ಹೋದರು. ಹೀಗೆಯೇ ಒಂದು ವಾರ ಕಳೆಯಿತು; ಆದರೆ ಚಂದ್ರಾವತಿ-ಪಾರ್ವತಿಯರಿಗೆ ಇವನ ಮೇಲೆ ಪ್ರೀತಿ ಇರಲಿಲ್ಲ. ಇವರು ಒಳಗಡೆ ಇದ್ದಂತೆಯೇ ಅವರು ತಮ್ಮ ಲಾಭವನ್ನು ಸಂಪಾದಿಸುತ್ತಿದ್ದರು; ಆದರೆ ಈತನು ಒಳಗಡೆ ಇರುವದರಿಂದ ಇತರ ಮಹಾಶಯರು ಒಳಗೆ ಪ್ರವೇಶಿಸಲು ಅಂಜುತ್ತಿದ್ದರು. ಆದ್ದರಿಂದ ಅವರು ರಾಮದಾಸನ ಮೇಲೆ ರೇಗಿಗೆದ್ದರು. ಆದರೂ ರಾಮದಾಸನು ಅವರನ್ನು ಅಂಟಿಕೊಂಡಿದ್ದವನಂತೆ ಅಲ್ಲಿಯೇ ಹೋಗುತ್ತಿದ್ದನು. ಒಂದು ವಾರದಿಂದೀಚೆಗೆ ಅವರು ರಾಮದಾಸನನ್ನು ಬಹಳವಾಗಿ ತಿರಸ್ಕರಿಸಿ, ನಿಂದಿಸಿ, ಹೀಯಾಳಿಸತೊಡಗಿದರು. ಆ ಕಠಿಣ ಹೃದಯದ ಹೆಂಗಸರ ಬಾಯಿಂದ ಬಾರದ ಬೈಗಳಿರಲಿಲ್ಲ. ಹೆಚ್ಚೇಕೆ? ಹಣದ ವೈಭವ ರಾಮದಾಸನಲ್ಲಿರುವಾಗ ಒಳ್ಳೇ ಪ್ರೀತಿ ಪ್ರೇಮದಿಂದ ವರ್ತಿಸುತ್ತಿರುವ ಆ ಸ್ತ್ರೀಯರು ಇಂದು ಅವನನ್ನು ನಾಯಿಗಿಂತಲೂ ಕಡೆಯಾಗಿ ಎಣಿಸಿದರು. ಹಣ ಕಂಡರೆ ಹೆಣ ಬಾಯಿ ಬಿಡುತ್ತದೆ, ಎಂಬಂತೆ ರಾಮದಾಸನಲ್ಲಿ ಹಣವಿರುವತನಕ ಬಗೆಬಗೆಯಿಂದ ಹಣವನ್ನು ಅಪಹರಿಸಿದರು. ಹಣವಿಲ್ಲದಾಗ ಏನು ಗತಿ! ಇವನನ್ನು ಮೂಸುವವರೇ ಇಲ್ಲದಾದರು. ಸ್ತ್ರೀಯರ ಸ್ವಭಾವವೇ ಇಂತಹದು.

ಒಂದು ದಿನ ರಾಮದಾಸನಿಗೆ ಸರಿಯಾದ ಸಮಯಕ್ಕೆ ಹೋಗಲಾಗಲಿಲ್ಲ. ಆಗ ಸುಮಾರು ಹತ್ತು ಗಂಟೆ

ರಾತ್ರಿ ಯಾಗಿತ್ತು. ಹೊಟ್ಟೆಗೆ ಸರಿಯಾಗಿ ಅನ್ನವಿಲ್ಲದ್ದ ರಿಂದಲೂ ಕೈಯಲ್ಲಿ ಕಾಸಿಲ್ಲದ ಚಿಂತೆಯಿಂದಲೂ ಬಹಳ ನಿತ್ರಾಣವಾಗಿದ್ದನು. ಸರಿಯಾಗಿ ನಡೆಯಲಾರದ ಅವನು ಉಪ್ಪರಿಗೆಯನ್ನು ಏರಲು ತೊಡಗಿದ ಅರ್ಧಕ್ಕೆ ಮುಟ್ಟು ತ್ತಲೇ ಸಾಕುಸಾಕಾಗಿ ಅಲ್ಲಿಯೇ ಕುಳಿತು ನಿಟ್ಟುಸಿರು ಬಿಟ್ಟ. ಐದು ನಿಮಿಷಗಳಾದ ಬಳಿಕ ಬಹು ಕಷ್ಟದಿಂದ ಹೇಗೋ ಏರಿ, ಮೂರಂತಸ್ತಿನ ಬಾಗಿಲ ಬಳಿಗೆ ಹೋಗಿ ಸೇರಿದ. ಬಾಗಿಲನ್ನು ತಟ್ಟಿ ಪಾರ್ವತಿಯನ್ನು ಕರೆದ. ಸುದ್ದಿಯೇ ಇಲ್ಲ. ರಾಮದಾಸನಿಗೆ ಕೋಪ ತಲೆಗೇರಿತು. ಬಾಯಿಗೆ ಬಂದಂತೆ ಮಾತನಾಡಿದ• ಬಾಗಿಲು ಒಡೆದು ಹೋಗುವರೀತಿಯಲ್ಲಿ ಬಾಗಿಲನ್ನು ದೂಡಿದ. ಆದರೂ ಪತ್ತೆ ಯಿಲ್ಲ. ಏನು ಮಾಡಬೇಕೆಂಬದು ರಾಮದಾಸನಿಗೆ ತಿಳಿಯ ಲಿಲ್ಲ. ಬಾಗಿಲನ್ನು ಪುನಃ ಪುನಃ ಬಡಿದು, ಇಬ್ಬರ ಹೆಸರ ನ್ನೆತ್ತಿ ಗಟ್ಟಿಯಾಗಿ ಕೂಗಿದ. ಇವನ ಉಪದ್ರವವನ್ನು ತಡೆಯಲಾರದೆ ಚಂದ್ರಾವತಿಯು ಅಲ್ಲಿಗೆ ಬಂದು-ಇದಾರು, ರಾಮದಾಸನಲ್ಲವೇ? ಈಗ ಇಲ್ಲಿಗೆ ಬಂದು ನಮಗೆ ಬಹಳ ತೊಂದರೆ ಕೊಟ್ಟೆ. ನಿಮ್ಮ ಕಾಟಕ್ಕಾಗಿ ಇಲ್ಲಿಗೆ ಬಂದಿರುವ ಸೆಟ್ಟಿ-ಸಾವುಕಾರರು ಗಾಬರಿಗೊಂಡು ಹೊರಗೆ ಓಡಿ ಬಿಟ್ಟಿರು. ಹಾ! ಇಂದಿನ ನಮ್ಮ ನಷ್ಟವನ್ನು ಹೇಳಲಾಗದು. ನೀವು ಇಲ್ಲಿಗೆ ಬಂದು ಈ ರೀತಿ ಉಪದ್ರವ ಕೊಡುವ ಬದಲು, ಇಲ್ಲಿಗೆ ಬಾರದಿರುವದೇ ಉತ್ತಮ. ಇನ್ನು ನಿಮಗೆ ಇಲ್ಲಿ ಸ್ಥಳ ಸಿಗಲಾರದು. ಸುಮ್ಮನೆ ಹೊರಟು ಹೋಗು.

ದಾರಿಯಲ್ಲಿ ಅಡ್ಡನಿಲ್ಲಬೇಡ. ನಮ್ಮ ಈ ದಿನದ ಅನ್ನವನ್ನೇ ಹಾಳು ಮಾಡಿದೆ. ಈ ಪ್ರಪಂಚವು ಹಣದಿಂದಲೇ ನಡೆಯುತ್ತಿದೆಂಬದು ನಿನಗೆ ತಿಳಿಯುವದಿಲ್ಲವೆ? ಅಂದ ಮೇಲೆ ಬರಿಗೈಯುವನಾದ ನಿನ್ನ ಪಾಡನ್ನು ನಿನಗೆ ಬಿಟ್ಟು, ನಮ್ಮ ಪಾಡನ್ನು ನಾವು ಹುಡುಕಬೇಕಾಗುವದು. ಆದ್ದರಿಂದ ನೀನು ಮನಸ್ಸಿಗೆ ಬೇಜಾರು ಮಾಡಿಕೊಳ್ಳದೆ, ಸುಂಕವಿಲ್ಲದ ದಾರಿಯಲ್ಲಿ ತಿರುಗಿ ಹೋಗು, ಎಂದಳು.

ಈ ಮಾತುಗಳನ್ನು ಕೇಳಿ ರಾಮದಾಸನಿಗೆ ಮಿತಿಮೀರಿದ ಕೋಪವು ತಲೆಗೇರಿತು. ಸೇಕರನ ಪತ್ರದ ಜ್ಞಾಪಕವೂ ಮನಸ್ಸಿಗೆ ಬಂದಿತು. ಆತನು ಆ ಕಠಿಣವಾದ ಮಾತುಗಳಲ್ಲಿ ಬರೆದದ್ದಕ್ಕೂ ಈಗ ಈ ಸ್ತ್ರೀಯರು ತನ್ನನ್ನು ಮೋಸಗೊಳಿಸಿದ್ದಕ್ಕೂ ಸರಿಯಾಯಿತೆಂದು ಭಾವಿಸಿ ಕನಿಕರಪಟ್ಟನು.

ಈಗ ಮೊದಲು ಬಾಗಿಲು ತೆರೆ; ನಿನ್ನ ಪುರಾಣ ಆ ಮೇಲೆ. ಸ್ತ್ರೀಯರ ಚಮತ್ಕಾರವನ್ನೆಲ್ಲಾ ನಾನು ಬಲ್ಲೆ, ಎಂದು ರಾಮದಾಸ ಗಂಭೀರವಾಗಿ ನುಡಿದ. ಇಂದಿನ ಮಟ್ಟಿಗೆ ಒಳಗಿದ್ದವರೇ ಚತುರರು. ಎಲೇ, ಬಾಗಿಲು ತೆರೆ. ಹಣಕ್ಕೆ ಹೆದರುವೆಯಾ? ಎಂದನು.

ಚಂದ್ರಾವತಿಗೆ ಧೈರ್ಯವಾಗಲಿಲ್ಲ. ಅಲ್ಲಿಂದಲೇ ಹಿಂದೆ ಸರಿದು ಪಾರ್ವತಿಯೊಡನೆ ಈ ಪ್ರಸ್ತಾಪವನ್ನು ಹೇಳಿದಳು. ಪಾರ್ವತಿಗೂ ಮನಸ್ಸಿಗೆ ಸಮಾಧಾನವಿರಲಿಲ್ಲ. ರಾಮದಾಸನು ಪುನಃ ಅವರನ್ನು ಕರೆದನು. ಅವರು

ಇವಸ ಬೊಬ್ಬೆಯನ್ನು ತಡೆಯಲಾರದಾದರು. ಪಾರ್ವ ತಿಯು ಬಾಗಿಲ ಬಳಿ ಬಂದು-ಇಲ್ಲಿಗೆ ಬರಿಗೈಯಿಂದ ಬಂದು ನಮಗೆ ಉಪದ್ರವ ಕೊಡುವದೇಕೆ? ಎಂದಳು.

ಇದುವರೆಗೆ ಕೊಟ್ಟದ್ದು ಸಾಲದೇ? ಇನ್ನೂ ಕೊಡ ಬೇಕೇ? ಎಂದ ರಾಮದಾಸ.

ಚಂದ್ರಾವತಿ-ಪಾರ್ವತಿಯರು ಸ್ವಲ್ಪ ಗುಣುಗಿ ಬಾಗಿಲು ತೆರೆದರು. ರಾಮದಾಸನು ಒಳಗೆ ಹೋಗಿ ಕುರ್ಚಿಯ ಮೇಲೆ ಕುಳಿತನು. ಅವರು ವಕ್ರ ದೃಷ್ಟಿಯಿಂದ ಕಾಣುತ್ತಿದ್ದರು. ಕುಳಿತು, ಕುಳಿತು ಬೇಸರವಾಯ್ತು. ಟೀ ತರಲು ಅಪ್ಪಣೆ ಇತ್ತ. ಇಬ್ಬರೂ ಒಳ ಕೋಣೆ ಸೇರಿ, ರಾಮದಾಸನನ್ನು ಯಮಲೋಕಕ್ಕೆ ಕಳುಹಿಸುವ ಉಪಾ ಯ ಹೂಡಿ, ಚಹದಲ್ಲಿ ತುಸ ವಿಷ ಬೆರಿಸಿ ತಂದು ಕೊಟ್ಟರು. ಹಸಿವಿನಿಂದ ಕಂಗಾಲಾದ ರಾಮದಾಸನು ಅದನ್ನು ಕುಡಿದನು. ಕುಡಿದ ಕೂಡಲೆ ತಲೆಗೆ ಅಮಲೇ ರಿತು. ಕುರ್ಚಿಯ ಮೇಲೆಯೇ ತಲೆ ಒರಗಿಕೊಂಡನು. ಪಾರ್ವತಿಯು ಲಗುಬಗನೆ ಅಲ್ಲಿಗೆ ಬಂದು ಅವನ ಕಿಸೆ ಪರೀಕ್ಷಿಸತೊಡಗಿದಳು. ಕಿಸೆಯಲ್ಲಿ ಹಣವೇನೂ ಇರಲಿಲ್ಲ. ಒಂದು ಪತ್ರ ಮಾತ್ರವಿತ್ತು. ಅದನ್ನು ಓದಿ ಅವಳಿಗೆ ಭಯವಾಯ್ತು. ಅದನ್ನು ಆಕೆ ಚಂದ್ರಾವತಿಗೂ ತೋರಿ ಸಿದಳು. ತಮ್ಮನ್ನು ಸಮುದ್ರಕ್ಕೆ ದೂಡಿ ಹಾಕುವೆನೆಂದು ಸೇಕರನು ಬರೆದದ್ದನ್ನು ಓದಿ ಹೃದಯದಲ್ಲಿ ಭಯಸೇರಿ ಕೊಂಡಿತು. ಅವರು ಆ ಪತ್ರವನ್ನು ಅಡಗಿಸಿ ಇಟ್ಟರು.

ನಂತರ ರಾಮದಾಸನನ್ನು ಎಬ್ಬಿಸಿದರು. ಅಮಲು ಹಿಡಿದ ರಾಮದಾಸನಿಗೆ ಏನೂ ಕಾಣಿಸುತ್ತಿರಲಿಲ್ಲ. ಆ ವಿಷದ ಪರಿಣಾಮವು ಕೂಡಲೆ ಆಗದೆ, ಅಮಲು ಆಗಿ ಸುಮಾರು ಐದಾರು ತಾಸುಗಳಲ್ಲಿ ಮರಣ ಉಂಟಾಗುವಂತಹದಿತ್ತು. ಆದ್ದರಿಂದ ರಾಮದಾಸನು ಅಮಲಿನಿಂದ ಅತ್ತ ಇತ್ತ ಹೊಯ್ದಾಡುತ್ತಿದ್ದನು. ಪಾರ್ವತಿಯು ರಾಮದಾಸನನ್ನು ಕುರ್ಚಿಯಿಂದ ಎಬ್ಬಿಸಿ-ಇಂದು ನಿಮಗೆ ಸೌಖ್ಯವಿಲ್ಲ. ರೋಗಗ್ರಸ್ತರು ಇಲ್ಲಿ ನಿಲ್ಲುವದು ಸರಿಯಲ್ಲ; ಆದ್ದರಿಂದ ನೀವು ಈಗಲೇ ಹೊರಟು ಹೋಗಿರಿ, ಎಂದು ನಿರ್ದಾಕ್ಷಿಣ್ಯದಿಂದ ನುಡಿದಳು. ರಾಮದಾಸನಿಗೆ ಅಮಲು ಏರಿದಂತೆಯೇ ಕೋಪವೂ ಏರಿತು. ಕಿಸೆಗೆ ಕೈ ಹಾಕಿ ಪತ್ರವಿದೆಯೋ? ಎಂದು ನೋಡಿದ. ಅಲ್ಲಿ ಪತ್ರವಿರಲಿಲ್ಲ. ಕೋಪವು ಇಮ್ಮಡಿಯಾಯ್ತು. ಅಮಲಿನಿಂದ ನೆಟ್ಟಗೆ ನಿಲ್ಲಲಾರದೆ ಬಿದ್ದುಬಿಟ್ಟ. ಇವರು ಅವನಿಗೆ ಬಗೆಬಗೆಯ ಚೇಷ್ಟೆ ಮಾಡಲು ಪ್ರಾರಂಭಿಸಿದರು. ಅದೊಂದು ಕೊನೆಯ ದಿನವೆಂದು ಭಾವಿಸಿದರು. ಪತ್ರವಿಲ್ಲದ್ದರಿಂದ ರಾಮದಾಸನು ಹುಚ್ಚನಂತಾದನು. ಚಂದ್ರಾವತಿಯನ್ನೂ ಪಾರ್ವತಿಯನ್ನೂ ವಿಚಾರಿಸಿದನು ಅವರು ಉತ್ತರ ಕೊಡಲಿಲ್ಲ. ಸೆರಗುಗಳನ್ನು ಎಳೆ ಎಳೆದು ಕೇಳಿದ. ನಿಜವಾಗಿಯೂ ಪತ್ರ ತೆಗೆದಿದ್ದರೂ, ಈತನನ್ನು ಕೋಣೆಯಿಂದ ಹೊರದೂಡಬೇಕೆಂಬ ಉದ್ದೇಶದಿಂದ ಕಾಣಲೇ ಇಲ್ಲವೆಂದು ನಟಿಸಿದರು. ರಾಮದಾಸನಿಗೆ ವಿಷದ ಪರಿಣಾಮವು

ಹೆಚ್ಚುತ್ತಾ ಬರುವದನ್ನು ಕಂಡು ಈತನು ಇಲ್ಲಿಯೇ ಜೀವ ಬಿಟ್ಟರೆ ತಾವು ಆಪತ್ತಿಗೆ ಗುರಿಯಾಗುವೆವೆಂದು ತಿಳಿದು, ಅವರು ಆವನನ್ನು ಹೊರಗಟ್ಟುವ ಯೋಜನೆಯನ್ನು ಕೈಕೊಂಡರು. ಹೊರಗೆ ಹೋಗಿರಿ, ಹೊರಗೆ ಹೋಗಿರಿ; ಎಂದು ಒತ್ತಾಯಪಡಿಸಿದರು.

ರಾಮದಾಸನಿಂದ ಆ ಮಾತುಗಳನ್ನು ಸಹಿಸಲಾಗಲಿಲ್ಲ. ಸಿಂಹನಂತೆ ಕಿಡಿಕಿಡಿಯಾದ. ಈ ಮಧ್ಯರಾತ್ರಿ ಕಾಲದಲ್ಲಿ ನಾನು ಇಲ್ಲಿಂದ ಹೋಗಬೇಕೆ? ಎಲ್ಲಿಗೆ? ನಿಮ್ಮಪ್ಪನ ಮನೆಗೋ? ಎರಡು ವರ್ಷಗಳಿಂದ ನನ್ನಿಂದ ಪಡೆದ ಹಣವು ನಿಮಗೆ ಸಾಲದಾಯಿತೇ? ಈಗ ನಾನು ಬೇಡನಾದೆನಲ್ಲವೇ? ಸರಿ! ಸರಿ! ನೀವೂ ನನಗೆ ಬೇಡ. ಈ ಲೋಕದಲ್ಲಿ ನೀವಿಬ್ಬರೇ ಸ್ತ್ರೀಯರಿರುವದಿಲ್ಲ. ನಿಮಗಿಂತಲೂ ನೂರಾರು ಪಾಲು ಹೆಚ್ಚು ಸೌಂದರ್ಯಯುತರಾದ ಸ್ತ್ರೀಯರು ನನಗೆ ಸಿಕ್ಕಲಾರರೆಂದು ತಿಳಿದಿರುವಿರಾ? ಛೀ! ಹೆಮ್ಮಾರಿಗಳೇ, ವಂಚಕರೇ, ಎನ್ನುವಷ್ಟರಲ್ಲಿ ಅವರಿಬ್ಬರೂ ಬಂದು ಆವನನ್ನು ಬಾಗಿಲ ಹೊರಗೆ ದೂಡಿ ಕದವನ್ನು ಮುಚ್ಚಿದರು.

---

## ಪರಿಚ್ಛೇದ ೧೫

ನೋಡಿದಿರಾ! ವೇಶ್ಯೆಯರ ಗುಟು-ಮಟ್ಟುಗಳನ್ನು! ಹಣವಿದ್ದರೆ ಅಲ್ಲಿ ಎಂಥ ಮೋಹ! ಎಷ್ಟು ಮೋಜು! ಎಷ್ಟು

ಉಪಚಾರ! ಹಣವಿಲ್ಲದಾಗ ಏನು ಗತಿ! ಹಣವಿಲ್ಲದ ಸಮ
ಯದಲ್ಲಿ ಆತನ ಮಾನ ಕಳೆಯಲು ಪ್ರಯತ್ನಿಸುವರಲ್ಲದೇ
ಮತ್ತೇನೂ ಇಲ್ಲ. ಇದೊಂದು ವೇಶ್ಯೆಯರ ವಿಶೇಷ
ಸ್ವಭಾವ. ವೇಶ್ಯೆಯರಿಗೆ ಹಣ ಕೊಟ್ಟಾಗಲೇ ಪರಿಚಯ;
ನಂತರ ಇಲ್ಲ. ಸುಮಾರು ಎರಡು ವರ್ಷದಿಂದ ರಾಮ
ದಾಸನಿಂದ ಹಣ ಪಡೆದು, ಕೊನೆಗೆ ಹಣವಿಲ್ಲದಾಗ ಅವ
ನನ್ನು ಮರಣಕ್ಕೆ ಗುರಿಪಡಿಸಲು ಚಹದಲ್ಲಿ ವಿಷ ಬೆರೆಸಿ
ಕೊಟ್ಟದ್ದು ನ್ಯಾಯವಲ್ಲ; ಆದರೆ ಅವರಿಗೆ ಬೇರೆ ಉಪಾಯ
ವಿರಲಿಲ್ಲ. ಅವರು ಬೇರೆಯವರನ್ನು ಸೆರೆ ಹಿಡಿದು ಹೆಚ್ಚು
ಹಣ ಪಡೆಯುತ್ತಿರುವದೇ ಇದಕ್ಕೆ ಕಾರಣ. ಯಾವ
ರೀತಿಯ ಜೀವನವೋ ಅದೇ ರೀತಿಯ ಮರಣ. ಸೇಕರನು
ಪತ್ರ ಮೂಲಕವಾಗಿ ತಿಳಿಸಿದ್ದಕ್ಕೂ ರಾಮದಾಸನ ಅವಸ್ಥೆ
ಹಾಗೆ ಆದದ್ದಕ್ಕೂ ಸರಿಯಾಯಿತೆಂಬದರಲ್ಲಿ ಸಂಶಯವಿಲ್ಲ.

---

## ಪರಿಚ್ಛೇದ ೧೬

ಅಲ್ಲಿಂದ ಹೊರಬಿದ್ದ ರಾಮದಾಸನು ಮೆಟ್ಟಲು
ಗಳನ್ನು ಇಳಿಯತೊಡಗಿದನು. ಸೇಕರನಿಗೆ ಪರಮಾತ್ಮನು
ಸಹಕರಿಸಿದನೆಂದು ತಿಳಿದ. ಅವನಿಗೆ ಭಯವು ಮಿತಿ
ಮೀರಿತು. ಧಮನಿಗಳಲ್ಲಿ ರಕ್ತವು ಬಿಸಿಯೇರಿ ರಭಸವಾಗಿ
ಓಡಲು ಮೊದಲಾಯ್ತು. ವಿಷವು ಹೆಚ್ಚು ಪರಿಣಾಮವ
ನ್ನುಂಟುಮಾಡುತ್ತಲಿದ್ದುದರಿಂದ ನೆಟ್ಟಗೆ ನಡೆಯಲು ಆಗು

ತ್ತಿರಲಿಲ್ಲ. ಮೆಟ್ಟಿಲುಗಳನ್ನು ಇಳಿಯುತ್ತಿರುವಾಗ ಕಾಲು ಜಾರಿ ಹಾವು ಹೊರಳಾಡಿಕೊಂಡು ಬಂದಂತೆ ಸುಮಾರು ಇಪ್ಪತ್ತೈದು ಮೆಟ್ಟಲುಗಳನ್ನು ಹೊರಳಾಡಿ ರಾಜರಸ್ತೆಗೆ ಬಿದ್ದ. ಪಾಪ! ರಾಮದಾಸನಿಗೆ ಅರ್ಧಜೀವವಾಯಿತು. ಆದರೂ ನೋವನ್ನು ಸಹಿಸಿಕೊಂಡು ಚಂದ್ರಾವತಿ, ಪಾರ್ವತಿಯರನ್ನು ಬಾಯಿಗೆ ಬಂದಂತೆ ಬೆಯ್ಯುತ್ತಾ ಮುಂದು ವರಿದನು. ಬೆಳದಿಂಗಳು ಶುಭ್ರವಾಗಿ ಪ್ರಕಾಶಿಸುತ್ತಿತ್ತು. ರಾಜರಸ್ತೆಯನ್ನು ಬಿಟ್ಟು ಒಂದು ಬೀದಿಯಲ್ಲಿ ಪ್ರವೇಶಿಸಿದನು. ತನ್ನಿಂದ ಸುಮಾರು ಹತ್ತು ಮಾರು ದೂರದಲ್ಲಿ ಸುಂದರಿಯಾದ ಓರ್ವ ಹೆಂಗಸು ಹೋಗುತ್ತಿರುವದನ್ನು ಕಂಡನು ತನ್ನಂತೆಯೇ ಇಲ್ಲಿಯೂ ಒಬ್ಬಳು ಅಲೆದಾಡುತ್ತಿದ್ದಳೆ. ಕಾಲಿಗೆ ಗೆಜ್ಜೆ ಕಟ್ಟಿಕೊಂಡು ನರ್ತಿಸುತ್ತಿದ್ದಾಳೆ. ಕೇಶ ರಾಶಿಗಳು ಉದ್ದಕ್ಕೆ ಸೀಡಿವೆ, ಎಂದೆಲ್ಲಾ ಭಾವಿಸಿದನು. ಚಂದ್ರಪ್ರಕಾಶದಲ್ಲಿ ಥಳಥಳಿಸುವ ಸೀರೆಯನ್ನು ಕಂಡು ಹುಚ್ಚು ತಲೆಗೇರಿತು. ರಾಮದಾಸನು ಸ್ತ್ರೀ ಮೋಹದಿಂದ ಅವಳನ್ನು ಹಿಡಿದು ನಿಲ್ಲಿಸಲು ಮುಂದೆ ಓಡಿದನು. ಇವನು ಓಡಿದಂತೆ ಆ ವ್ಯಕ್ತಿಯೂ ಓಡುತ್ತಿತ್ತು. ಮಾಳಿಗೆಯಿಂದ ನಿರಾಶನಾಗಿ ಹೊರಬಿದ್ದ ರಾಮದಾಸನು ಅವರಿಗಿಂತಲೂ ಮಿಗಿಲಾದಂತಹ ಸುಂದರಿಯನ್ನು ಪಡೆದೆನೆಂದು ಮನಸ್ಸಿನಲ್ಲಿ ಉಬ್ಬಿ ರಭಸವಾಗಿ ಓಡಿದನು. ಆ ಸ್ತ್ರೀಯು ಎರಡು ಮೂರು ಬೀದಿಗಳನ್ನು ಸಂದರ್ಶಿಸಿ ರಭಸವಾಗಿ ಮುಂದೆ ಸಾಗುತ್ತಿದ್ದಳು. ರಾಮ

ದಾಸನೂ ಹಿಂಬಾಲಿಸಿಕೊಂಡು ಓಡುತ್ತಿದ್ದನು. ಕೆಲ ವೊಮ್ಮೆ ಆಯಾಸದಿಂದ ಮಾರ್ಗದಲ್ಲಿ ಬಿದ್ದು ಹೊರಳಾಡು ತ್ತಿದ್ದನು. ಸ್ತ್ರೀ ಮೋಹ ಬಲಾತ್ಕಾರದಿಂದಾಗಿ ನಿರಾಶನಾ ಗದೇ ಪುನಃ ಪುನಃ ಹಿಂದಿನಿಂದ ಓಡುತ್ತಿದ್ದನು. ಸುಂದರಿ ಮಣಿಯೇ, ನಿಲ್ಲು, ನಿಲ್ಲು. ಬೆದರಬೇಡ ನಿನ್ನೊಂದಿಗೆ ನಾನೂ ಇದ್ದೇನೆ, ಎಂದು ಹೇಳಿದನು. ಇದಕ್ಕೆ ಹಿಮ್ಮಾತು ಇಲ್ಲ, ಮುಮ್ಮಾತೂ ಇಲ್ಲ. ಆ ಸ್ತ್ರೀ ವ್ಯಕ್ತಿಯು ಒಂದೇ ವೇಗದಿಂದ ಮುಂದುವರಿಯುತ್ತಿತ್ತು. ಒಮ್ಮೆ ಸೆರಗು ಹಿಡಿ ದಿದ್ದರೆ ಒಳ್ಳೆಯದಿತ್ತು, ಎಂದು ಭಾವಿಸಿದನು; ಆದರೆ ಎಲ್ಲವೂ ನಿಷ್ಫಲ. ಆಲೋಚನೆಗಳೆಲ್ಲವೂ ಗಾಳಿ ಗೋಪುರ. ಇಡೀ ರಾತ್ರಿಕಾಲ ಅವಳ ಹಿಂದೆ ಓಡಿ, ಓಡಿ ಬಳಲಿ ದನು. ಅವಳ ಕಾಲಿನ ಗೆಜ್ಜೆಗಳ ಶಬ್ದವು ರಾಮದಾಸನ ಕಿವಿಗೆ ಬೀಳುತ್ತಲೇ ಅವನಿಗೆ ನವಚೇತನ ಉಂಟಾಗು ತ್ತಿತ್ತು.

ಸುಮಾರು ಐದು ಗಂಟೆಯ ಸಮಯಕ್ಕೆ ಆ ಸ್ತ್ರೀಯು ಒಂದು ಬೀದಿಯಿಂದ ಹೊರಬಿದ್ದು ಸಮುದ್ರ ಕರಾವಳಿಗೆ ನಡೆದು. ನೀರಿನ ಸಮೀಪಕ್ಕೆ ಸೇರಿದಳು. ಇವಳೀಗ ತನ್ನ ಕೈಗೆ ಸಿಕ್ಕುವಳೆಂದು ರಾಮದಾಸ ಸಂತೋಷಗೊಂಡನು; ಆದರೆ ಆಕೆ ಸಮುದ್ರದೇವಿಯೆಂಬ ವಿಷಯವನ್ನು ಮಾತ್ರ ಆತ ತಿಳಿಯದಾದನು. ಸುಂದರಿಯು ನೀರಮೇಲಿಂದ ನಡೆ ಯುತ್ತ ಮುಂದುವರಿದಳು. ತಾನೂ ನೀರಲ್ಲಿಳಿದು ಮುಂದು ವರಿದನು. ಅವಳ ಕಾಲುಗಳನ್ನು ಹಿಡಿದಾದರೂ ಹಿಂದೆಳೆ

ಯುವ ಅಭಿಲಾಷೆಯಿಂದ ರಾಮದಾಸನು ಘಕ್ಕನೆ ನೀರಿ
ನಿಂದ ಮೇಲಕ್ಕೆ ಹಾರಿ ಮುಂದಕ್ಕೆ ಓಡಿದನು. ಅಷ್ಟರಲ್ಲಿ
ಭಯಂಕರವಾದಂಥ ಒಂದು ತೆರೆಯು ಬಂದು ರಾಮ
ದಾಸನನ್ನು ಹಿಂದಕ್ಕೆ ದೂಡಿ ಉಸುಕಿನ ಮೇಲೆ ಎತ್ತಿ
ಹಾಕಿತು. ಕೂಡಲೆ ತುಸ ಉಪ್ಪು ನೀರು ಅವನ ಹೊಟ್ಟೆ
ಯಲ್ಲಿ ಸೇರಿತು. ಅತ್ತ ನೋಡುತ್ತಲೆ ಆ ಸುಂದರಿಯು
ಮಾಯವಾಗಿದ್ದಳು. ಮೊದಲೇ ಕುಡಿಸಿದ್ದ ವಿಷದ ಮೇಲೆ
ಉಪ್ಪು ನೀರು ಬಿದ್ದಾಗ ಎಣ್ಣೆಗೆ ನೀರು ಹೊಯ್ದಂತಾಗಿ
ಹೃದಯವು ಉರಿಯಲಾರಂಬಿಸಿತು.

---

## ಪರಿಚ್ಛೇದ ೧೭

ಆಗ ಸಮುದ್ರಕ್ಕೆ ಭರತಿ ಬರುವದರಲ್ಲಿತ್ತು. ಇವ
ನಿಗೆ ಮರಳಿನಿಂದ ಎದ್ದು ನಡೆಯುವಷ್ಟು ಬಲವಿರಲಿಲ್ಲ.
ಆಗ ಇನ್ನೂ ಬೆಳಗಾಗಿರಲಿಲ್ಲ. ಭರತಿಯಿಂದ ಸಮುದ್ರವು
ಉಕ್ಕಿತು. ನೀರಿನ ತೆರೆಗಳು ಈತನ ಕಾಲಿಗೆ ಹೊಡೆದವು.
ಇನ್ನು ತನಗೆ ಅಂತ್ಯಕಾಲವೇ ಪ್ರಾಪ್ತವಾಯಿತೆಂದು
ತಿಳಿದು ಕಳವಳಪಟ್ಟನು. ಎದ್ದೇಳಲಿಕ್ಕೆ ಪ್ರಯತ್ನಿಸಿದ.
ಆಗಲಿಲ್ಲ. ಸೇಕರನು ಬರೆದಂತೆ ತನ್ನ ಜೀವನವು ಕೊನೆ
ಗಂಡಿತೆಂದು ತಿಳಿದ. ಕೆಟ್ಟವನಿಗೆ ದೇವರ ಸಹಾಯವಿಲ್ಲ
ವೆಂಬುದನ್ನು ತಿಳಿದುಕೊಂಡು ಪಶ್ಚಾತ್ತಾಪಪಟ್ಟ. ಮರ
ಣಕ್ಕೆ ಅಂಜಿದ; ಆದರೆ ಮಾಡುವದೇನು? ಆ ಕಾಲಕ್ಕೆ

ಅವನನ್ನು ರಕ್ಷಿಸುವವರಾರು? ನೀರು ಮೇಲೇರುತ್ತಾ ಬಂದು ಕಾಲುಗಳು ಮುಳುಗಿದವು. ಗಾಳಿಯು ರಭಸ ವಾಗಿ ಬೀಸುತ್ತಲಿತ್ತು. ತೆರೆಗಳ ಭಯಂಕರ ಶಬ್ದವು ಬಹು ದೂರದಿಂದ ಕೇಳಿ ಬರುತ್ತಿತ್ತು. ತಾನೀಗ ಖಂಡಿತ ವಾಗಿಯೂ ಸಾಯುವೆನೆಂದು ತಿಳಿದು ತನ್ನವರನ್ನೆಲ್ಲಾ ಒಮ್ಮೆ ಜ್ಞಾಪಕಕ್ಕೆ ತಂದುಕೊಂಡನು.

ರಾ:-ಅಯ್ಯೋ! ಕಷ್ಟವೇ! ಹಾ! ಪಾರ್ವತಿ-ಚಂದ್ರಾ ವತಿಯರೇ, ನೀವು ಇಂದು ನನ್ನನ್ನು ಹೊರಗಟ್ಟದಿದ್ದರೆ ನಾನಿಲ್ಲಿಗೆ ಬರುತ್ತಿದ್ದನೇ? ಇಂದೊಂದು ರಾತ್ರಿ ಅಲ್ಲಿಯೇ ಇರಗೊಟ್ಟಿದ್ದರೆ ನನ್ನ ಅವಸ್ಥೆಯು ಈ ತರದ್ದಾಗುತ್ತಿತ್ತೇ? ಹಲವು ವರ್ಷಗಳಿಂದ ನನ್ನನ್ನು ಮೋಸಗೊಳಿಸಿ ನನ್ನ ರಕ್ತವನ್ನೇ ಹೀರಿದಿರಿ; ಆದರೆ ಇಂದು ನನ್ನಲ್ಲಿ ಕಾಸಿಲ್ಲ ದಾಗ ನನ್ನನ್ನು ಹೊರ ದೂಡಿ ಪಾಪ ಗೈದಿರಿ, ಘಾತಮಾಡಿ ದಿರಿ. ನನ್ನ ಹೆಂಡತಿ-ಮಕ್ಕಳ, ತಾಯಿ-ತಮ್ಮನ ಪಶ್ಚಾತ್ತಾ ಪಕ್ಕೆ ಕಾರಣರಾದ ನಿಮ್ಮ ಮೇಲೆ ಅವರ ಗೋಳಾಟದ ಕಣ್ಣೀರು ವಿಷವಾಗಿ ಪರಿಣಮಿಸದಿರದು ಅಯ್ಯೋ, ತಾಯಿ! ಈ ವೃದ್ಧಾಪ್ಯದಲ್ಲಿಯೂ ನಿನಗೆ ಕಷ್ಟಕೊಟ್ಟೆ; ಕಣ್ಣೀರು ಸುರಿಸುವಂತೆ ಮಾಡಿದೆ. ಆಭರಣಗಳನ್ನು ಮಾರಿಸಿ ಪರ ಸ್ತ್ರೀಯರೊಡನೆ ಸೇರಿ ಲೋಕಾಪವಾದ ಹೊಂದಿದೆ. ಅತ್ಯಂತ ಪಾಪವನ್ನು ಮಾಡಿದೆ. ನಿನ್ನನ್ನು ಪಶ್ಚಾತ್ತಾಪಕ್ಕೆ ಗುರಿಪಡಿಸಿದಂಥ ಈ ರಾಮದಾಸನನ್ನು ಕ್ಷಮಿಸುವೆಯಾ? ಎಲೋ ಸೇಕರ, ನನ್ನ ಒಂದು ಮಾತನ್ನು ಆಲಿಸುವೆಯಾ?

ತಮ್ಮನಾದ ನಿನ್ನನ್ನು ಸಹೋದರ ದೃಷ್ಟಿಯಿಂದ ಕಾಣದೇ ತಿರಸ್ಕರಿಸಿದ್ದಕ್ಕಾಗಿ ಕ್ಷಮಿಸುವೆಯಾ? ಕೊನೆಯದಾಗಿ ದ್ವಿತೀಯ ಪತ್ನಿಯನ್ನು ತರತರಾಂತರ ಕಷ್ಟಗಳಿಗೆ ಗುರಿಪಡಿಸಿ, ಹಿಂದಕ್ಕೆ ಓಡಿಸಿದ ಪಾಪವನ್ನು ಕ್ಷಮಿಸುವೆಯಾ ಪರಮಾತ್ಮ! ಬಂಧು-ಬಳಗ ಕುಟುಂಬವನ್ನು ಬಿಟ್ಟು ಪರಸ್ತ್ರೀಯರ ಕಣ್ಣಿಗೆ ಸೆರೆ ಸಿಕ್ಕು ಉಪಾಯದಿಂದ ತಾಯಿ-ತಮ್ಮನಿಂದ ಹಣ ಪಡೆದು, ತನಗೂ ಉಪಯೋಗಿಸದೇ ಪರಸ್ತ್ರೀಯರನ್ನು ಉದ್ಧಾರ ಮಾಡಿದ ಪಾಪವನ್ನು ಕ್ಷಮಿಸುವೆಯಾ ಭಗವಂತ! ಇದೆಲ್ಲಕ್ಕೂ ಸ್ತ್ರೀ ಮೋಹವೇ ನನಗೆ ವಂಚಿಸಿ ಮೋಸಕೊಟ್ಟಿತು! ಸ್ತ್ರೀ ಮೋಹವೇ ನನಗೆ ಕಂಟಕ ಪ್ರಾಯವಾಯ್ತು! ಸ್ತ್ರೀ ಮೋಹವೇ ನನ್ನನ್ನು ಇಲ್ಲಿಗೆ ತಂದೊಡ್ಡಿತು! ಸ್ತ್ರೀ ಮೋಹವೇ ಲೋಕದ ಅಶಾಂತತೆಗೆ ಕಾರಣವಾದುದು! ಹಾ! ಪರಮಾತ್ಮ ನನ್ನನ್ನು ಕ್ಷಮಿಸು. ಎನ್ನುವಷ್ಟರಲ್ಲಿ ಬಲವಾದ ತೆರೆಯೊಂದು ಬಂದು ರಾಮದಾಸನನ್ನು ಸಮುದ್ರಕ್ಕೆ ಎಳೆದೊಯ್ದಿತು! ಆಯಿತು!! ಜೀವನದ ಹೋರಾಟವೆಲ್ಲ ಮುಗಿಯಿತು!!!

---

## ಪರಿಚ್ಛೇದ ೧೮

ಸತ್ಕುಲೋತ್ಪನ್ನನಾದ ರಾಮದಾಸನು ಸಾಕಷ್ಟು ವಿದ್ಯೆಯನ್ನು ಸಂಪಾದಿಸಿ ಜ್ಞಾನ ಬಲವನ್ನು ಹೆಚ್ಚಿಸಿದು

ದರ ಪ್ರಯೋಜನವೇನು? ತಾಯಿ-ತಪ್ಪನನ್ನು ವಂಚಿಸಿ ಹಣ ಪಡೆದು ಪರಸ್ತ್ರೀಯರ ಕೈಗೆ ಹೊಯ್ದು ದೊರೆಕಿಸಿದ ಲಾಭವೇನು? ಉಚ್ಚ ವಿದ್ಯೆ ಪಡೆದವನಾದರೂ, ಒಳ್ಳೆಯ ಬಳಗದಲ್ಲಿ ಜನಿಸಿ ಬೆಳೆದವನಾದರೂ, ಮಿತಿಮೀರಿದ ಸ್ತ್ರೀ ಮೋಹದಿಂದಾಗಿ ದೇವತಾಸ್ವರೂಪಿಯಾದ ಸ್ತ್ರೀಯೊಬ್ಬ ಳನ್ನು ಬೆನ್ನಟ್ಟಿ ಈ ಭಯಂಕರ ಸ್ಥಳಕ್ಕೆ ಬಂದು ಸಮು ದ್ರಕ್ಕೆ ಆಹುತಿಯಾಗಬೇಕಾಯಿತು. ಇದೆಲ್ಲವೂ ದೈವ ಸಂಕಲ್ಪವಲ್ಲದಿದ್ದರೆ ಮತ್ತೇನಾಗಿರಬಹುದು?

ಸುಮಾರು ಆರು ಗಂಟೆಯ ಸಮಯಕ್ಕೆ ಬೆಸ್ತರು ಮೀನು ಹಿಡಿದುಕೊಂಡು ಹಿಂತೆರಳುವಾಗ ಯಾವದೋ ಒಂದು ಮನುಷ್ಯ ಶವವು ತೆರೆಯೊಡನೆ ಆಡಿ ಮೇಲಾಗು ತ್ತಿತ್ತು. ಅದನ್ನು ಹಿಡಿಯಲು ಬೆಸ್ತರು ಆಲೋಚಿಸಿದರು; ಆದರೆ ಬಿರುಗಾಳಿಯು ಭಯಂಕರವಾಗಿದ್ದದರಿಂದ ತಮ್ಮ ದೋಣಿಗಳನ್ನು ಸಂರಕ್ಷಿಸುವದೇ ಅವರಿಗೆ ಕಷ್ಟವಾಯಿತು. ಶರೀರವು ಸಮುದ್ರದ ಮಧ್ಯಕ್ಕೆ ಸೇರಿತು. ಬೆಸ್ತರು ಬೆಳಗಾ ಗುತ್ತಲೇ ತಮ್ಮ ಮೀನುಗಳನ್ನು ಹಿಡಿದು ಮಾರಾಟಕ್ಕೆ ತೊಡಗಿದರು. ಹೀಗಿರುತ್ತಲೇ ಸಮುದ್ರದಲ್ಲಿ ಕಂಡ ಶವದ ಸುದ್ದಿಯು ಹರಡಿತು. ಅಲ್ಪಾವಧಿಯಲ್ಲಿಯೇ ಆ ಶವದ ಸುದ್ದಿ ಊರಲ್ಲೆಲ್ಲಾ ಹರಡಿತು.



# ಪರಿಚ್ಛೇದ ೧೯

ಸೇಕರನು ಊರಿಗೆ ಹಿಂತೆರಳಿ ಅಂದಿಗೆ ಆರೇ ದಿನ ಗಳಾಗಿದ್ದವು ರಾಮದಾಸನ ವಿಷಯವನ್ನು ಚನ್ನಾಗಿ ವರ್ಣಿಸಿ, ವಿವರಿಸಿ ತಾಯಿಯ ಕಿವಿಗೆ ಚನ್ನಾಗಿ ನಾಟಿಸಿ ದನು. ಇದನ್ನು ಕೇಳುತ್ತಲೇ ರಾಧೆಯು ಜೀವ ಹಾರಿತು. ಮೊದಲು ಸೇಕರನು ಬರೆವ ಪತ್ರವನ್ನು ಓದಿ ಅವಳು ಉಬ್ಬಿಹೋಗಿದ್ದಳು. ತರತರದ ಗಾಳಿಗೋಪುರಗಳನ್ನು ಕಟ್ಟಿಕೊಂಡು ಚಿಂತೆಗಳಿಲ್ಲದೇ ಹಲವು ದಿನಗಳನ್ನು ಕಳೆ ದಿದ್ದಳು; ಆದರೆ ಆಕಸ್ಮಾತ್ತಾಗಿ ಈ ವಿಚಾರವನ್ನು ಕೇಳು ತ್ತಲೇ ರಾಧೆಗೆ ಜೀವವಿಲ್ಲದಂತಾಯ್ತು. ಪುತ್ರವಾತ್ಸಲ್ಯ ದಿಂದ ಅನ್ನ-ನೀರು ಬಿಟ್ಟು, ಹಗಲು-ರಾತ್ರಿ ರಾಮದಾಸ ನನ್ನೇ ಚಿಂತಿಸುತ್ತಾ ಬಿದ್ದುಕೊಂಡಳು.

ಸೇಕರನು ಊರಿಗೆ ತೆರಳಿದಂದಿನಿಂದ ಆನಂದನಿಗೆ ರಾಮದಾಸನ ಪತ್ತೆ ಇರಲಿಲ್ಲ. ಒಂದು ವಾರದ ನಂತರ ಆನಂದನು ಪುನಃ ಅದೇ ಸ್ಥಳಕ್ಕೆ ಹೋಗಿ ವಿಚಾರಿಸಿದ; ಆದರೆ ರಾಮದಾಸನು ಕೆಲವು ದಿನಗಳಿಂದ ಅಲ್ಲಿಗೆ ಬರು ತ್ತಲೇ ಇಲ್ಲವೆಂಬ ಉತ್ತರ ಬಂತು. ಅಷ್ಟರಲ್ಲಿಯೇ ಆನಂ ದನ ಮನಸ್ಸಿಗೆ ಇವರ ದುರಾಚಾರದ ವಿಷಯ ಹೊಳೆ ಯಿತು ಆತನಲ್ಲಿ ಹಣವಿಲ್ಲದ್ದನ್ನು ಕಂಡು ಅವನಿಗೆ ಏನೋ

ಮಾಡಿ ಹೊರಗಟ್ಟಿರಬೇಕೆಂದು ಭಾವಿಸಿಕೊಂಡು ಹಿಂತೆರ ಳಿದ. ಅಷ್ಟರಲ್ಲಿಯೇ ಆ ಶವದ ಸುದ್ದಿ ಆನಂದನಿಗೂ ತಿಳಿ ಯಿತು ಇದರಿಂದಾಗಿ ಕ್ರಮಶಃ ರಾಮದಾಸನು ಸಮು ದ್ರಕ್ಕೆ ಬಿದ್ದು ಆತ್ಮಹತ್ಯೆ ಮಾಡಿಕೊಂಡಿರಬೇಕೆಂದು ಗ್ರಹಿ ಸಿದ. ಹೀಗಿರುವಾಗ ರಾಮದಾಸನು ಚಂದ್ರಾವತಿ-ಸಾರ್ವ ತಿಯರೊಡನೆ ಜಗಳವಾಡಿ ಉಪ್ಪರಿಗೆಯಿಂದ ಹೊರದೂ ಡಲ್ಪಟ್ಟಿರುತ್ತಾನೆಂಬ ಸುದ್ದಿಯು ಆನಂದನ ಕಿವಿಗೆ ಬಿತ್ತು. ಇದರಿಂದ ಆ ಶವವು ರಾಮದಾಸನದೇ ಆಗಿರಬೇಕೆಂದು ನಿರ್ಣಯಿಸಿದನು. ಸೇಕರನು ಬರೆದ ಪತ್ರಕ್ಕೂ ರಾಮದಾ ಸನಿಗೆ ಒದಗಿದ ಅವಸ್ಥೆಗೂ ದೈವಸಂಕಲ್ಪದಿಂದ ಜೊತೆ ಗೂಡಿದ್ದುದನ್ನು ನೋಡಿ ಆಶ್ಚರ್ಯಪಟ್ಟನು. ಆ ಕೂಡಲೆ ಆತನು ಸೇಕರನಿಗೆ ರಾಮದಾಸನ ನಿಧನದ ಪತ್ರ ಬರೆ ದನು. ಸೇಕರನು ಊರಿಗೆ ಮುಟ್ಟಿ ಹದಿನೈದು ದಿನಗಳಾ ಗುವಷ್ಟರಲ್ಲಿಯೇ ಆನಂದನ ಆ ಪತ್ರ ಬಂತು. ರಾಮದಾ ಸನು ಉಪ್ಪರಿಗೆಯ ಸ್ತ್ರೀಯರಿಂದ ಹೊರದೂಡಲ್ಪಟ್ಟವ ನಾಗಿ, ಜೀವವನ್ನು ಸಮುದ್ರಕ್ಕೆ ಆಹುತಿ ಕೊಟ್ಟಿದ್ದಾನೆಂಬ ಸಂಗತಿಯನ್ನು ಕೇಳಿ ಸೇಕರನಿಗೆ ಒಂದಿಷ್ಟು ಸಂತೋಷವೂ ಆಯಿತು. ಇನ್ನೊಮ್ಮೆ ದುಃಖವೂ ಉಕ್ಕಿ ಬಂತು. ತಾನು ಹೇಗೆ ಪತ್ರದಲ್ಲಿ ಬರೆದು ತಿಳಿಸಿದ್ದನೋ ಹಾಗೆಯೇ ಪರ ಮಾತ್ಮನು ಕಾರ್ಯದಲ್ಲಿ ಸಾಧಿಸಿಯೇಬಿಟ್ಟನು, ಎಂದು ಮನಸ್ಸಿನಲ್ಲಿ ತಂದುಕೊಂಡ. ಈ ವಿಚಾರವನ್ನು ತಾಯಿಗೆ ತಿಳಿಸುತ್ತಲೇ ಮೊದಲೇ ಪುತ್ರವಾತ್ಸಲ್ಯದಿಂದ ಕೊರಗಿ

ಹೋದಂಥ ರಾಧೆಯು ಆತ್ಮಹತ್ಯಗೇ ಸಿದ್ಧಳಾದಳು. ರಾಮದಾಸನ ಮರಣಕ್ಕೆ ಸೇಕರನೇ ಕಾರಣನೆಂದು ಕಲ್ಪಿಸಿ ಶಪಿಸತೊಡಗಿದಳು. ಸೇಕರನು ಬೊಂಬಾಯಿಗೆ ಹೋಗಿ ಏನೋ ಉಪಾಯದಿಂದ ಅವನನ್ನು ಕೊಲೆ ಮಾಡುವ ಹಂಚಿಕೆಯನ್ನು ಹೂಡಿ ಊರಿಗೆ ಬಂದಿರಬೇಕೆಂದು ಆಕೆ ಸಂಶಯಗೊಂಡಳು. ಮೂರನೆಯ ದಿನದಲ್ಲಿಯೇ ಮಗನ ಮರಣದ ದುಃಖದಿಂದ ರಾಧೆಯೂ ಪರಲೋಕವಾಸಿಯಾದಳು. ಸೇಕರನು ತನ್ನ ತಾಯಿಯ ಪರಲೋಕದ ಕಾರ್ಯಗಳನ್ನೆಲ್ಲ ಮುಗಿಸಿದನು. ತಾಯಿಯೂ, ರಾಮದಾಸನೂ ಅದೃಶ್ಯರಾದರು. ಸೇಕರನು ತನ್ನ ಭಂಡಸಾಲೆಯನ್ನು ಚನ್ನಾಗಿ ನಡೆಯಿಸಿಕೊಂಡು ವ್ಯಾಪಾರ ವ್ಯವಹಾರದಲ್ಲಿ ಮಗ್ನನಾದನು. ಹೀಗೆಯೇ ಕಥಾನಾಯಕರಲ್ಲಿ ಒಬ್ಬನಾದ ಸೇಕರನು ಸಂಸಾರ ಸುಖದೊಂದಿಗೆ ಬೆರೆತು, ಸುಖ-ಸಂತೋಷಗಳಲ್ಲಿ ನಿಮಗ್ನನಾಗಿದ್ದನು.

---

೫

ವಾಚಕರೇ, ನಾವಿನ್ನು ಬೊಂಬಾಯಿ ಪಟ್ಟಣಕ್ಕೆ ತೆರಳೋಣ. ರಾಮದಾಸನ ಶವದ ಪತ್ತೆಯೆಲ್ಲಿಯಾದರೂ ಆಗುತ್ತದೋ ಎಂದು ಹಲವು ದಿನಗಳ ವರೆಗೆ ಆನಂದನು ಪ್ರಯತ್ನಪಟ್ಟನು; ಆದರೆ ಪ್ರಯೋಜನವೇನೂ ಆಗಲಿಲ್ಲ ರಾಮದಾಸನಿಗೆ ಸಮುದ್ರವೇ ಸ್ಮಶಾನವಾಗಿ ಹೋಯಿತು. ಪಾಪ! ಹಿಂದೂ ಜನಾಂಗದಲ್ಲಿ ಹುಟ್ಟಿ ಬೆಳೆದವನಿಗೆ ಸತ್ತ ನಂತರ ಅಗ್ನಿಸಂಸ್ಕಾರವೂ ಇಲ್ಲದಾಯಿತು ಶವ ಸಿಗುತ್ತಿದ್ದರೆ ಆನಂದನಾದರೂ ಮಾಡುತ್ತಿದ್ದನೋ ಏನೋ? ಆದರೆ ಶೇಕರನಿಗೆ ಅದರ ಗೊಡವೆಯೇ ಇರಲಿಲ್ಲ. ಪ್ರಿಯ ಓದುಗರೇ, ನಿಮಗೆಲ್ಲಿಯಾದರೂ ರಾಮದಾಸನ ಪರಿಚಯವಿದ್ದುದಾದರೆ, ಅವನ ಆತ್ಮಕ್ಕೆ ಚಿರ ಶಾಂತಿ ದೊರೆಯಲೆಂದು ಪರಮಾತ್ಮನನ್ನು ಪ್ರಾರ್ಥಿಸಿರಿ. ಅವನನ್ನು ನರಕದ ದಾರಿಯನ್ನು ತಪ್ಪಿಸಿ ಸ್ವರ್ಗಲೋಕಕ್ಕೆ ದೂಡಿಬಿಡಿರಿ ಹೀಗೆಯೆ ಸತ್ಕರ್ಮವನ್ನು ಮಾಡಿ ಪುಣ್ಯವನ್ನು ಗಳಿಸಿ ಧನ್ಯರಾಗಿರಿ!

---

ಸ ಮಾ ಪ್ತಿ.

---

ಪ್ರಿಂಟರ: — ವಿ. ಪಿ. ಕಾಳೆ,
ಶ್ರೀ ಶೇಷಾಚಲ ಪ್ರೆಸ್ಸ, ಮದಿಹಾಳ-ಧಾರವಾಡ